ಸಾಹಿತ್ಯ ಸಮೀಕ್ಷೆ—೧

# ಶ್ರೀ. ವಿನಾಯಕರು



ಸಂಪಾದಕರು :

ಜಿ. ಬಿ. ಜೋಶಿ

ಕೆ. ಡಿ. ಕುರ್ತಕೋಟಿ

೧೯೫೮

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

# ಮೊದಲಮಾತು

ಶ್ರೀ. ವಿನಾಯಕ ಕೃಷ್ಣ ಗೋಕಾಕರು ೪೦ನೆಯ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ಆಯ್ಕೆ ಹೊಂದಿರುವ ಈ ಶುಭ ಮುಹೂರ್ತದ ನೆನಪಿಗಾಗಿ ಈ ಪುಸ್ತಕವನ್ನು ಪ್ರಕಟಿಸಲು ಸಂತೋಷವೆನಿಸುತ್ತದೆ. ಆದರೆ ಈ ಪುಸ್ತಕದ ಮೂಲ ಉದ್ದೇಶ ವಿನಾಯಕರ ಸಾಹಿತ್ಯವಿಮರ್ಶೆಯೇ ಹೊರತು ಅವರ ಸ್ತುತಿ ಪಾಠವಲ್ಲ; ಸಾಹಿತ್ಯರಸಿಕತೆಯ ಒಂದು ಪ್ರತೀಕ, ಮೂರ್ತಿಪೂಜೆಯಲ್ಲ. ಹೊಸ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕೆ ವಿನಾಯಕರು ಅನೇಕ ವಿಧದಲ್ಲಿ ಕಾರಣ ಪುರುಷರಾಗಿದ್ದಾರೆ. ಅವರ ವಿಪುಲವಾದ ಕಾರ್ಯಕ್ಷೇತ್ರವನ್ನು ವಿಹಂಗಮದೃಷ್ಟಿಯಿಂದಲಾದರೂ ಪರ್ಯಾಲೋಚಿಸುವದು ಇಂದು ಅವಶ್ಯವಾಗಿದೆ. ಅವರು ನೀಡಿದ ಕೃತಿಗಳಿಗೇ ಮೆಚ್ಚಿ ನಾಡು ಗೌರವವನ್ನು ಸಲ್ಲಿಸುತ್ತಿರುವಾಗ ಇಂಥ ಕಾರ್ಯ ಆಗತ್ಯವೂ ಹೌದು, ಸ್ಪೃಹಣೀಯವೂ ಹೌದು.

ವಿನಾಯಕರು ಬೇಂದ್ರೆಯವರು ಕಟ್ಟಿದ 'ಗೆಳೆಯರ ಗುಂಪಿ'ನ ಪ್ರಭಾವಶಾಲಿಯಾದ ಘಟಕಗಳಲ್ಲೊಬ್ಬರು. 'ಗುಂಪು' ಮುರಿದು ಹೋದರೂ ವಿನಾಯಕರು ತಮ್ಮ ಪ್ರತಿಭೆಯನ್ನು ಅವ್ಯಾಹತವಾಗಿ ಬೀರುತ್ತಿರುವದು ಅವರ ಸ್ವಯಂಪ್ರಭೆಯ ದ್ಯೋತಕವಷ್ಟೇ ಅಲ್ಲ, ನಾಡಿನ ಪುಣ್ಯವೂ ಆಗಿದೆ. ಒಂದು ದೃಷ್ಟಿಯಿಂದ ವಿನಾಯಕರ ಪ್ರತಿಭೆ ಗೆಳೆತನ ಬೆಳಸಿದ 'ಅಖಂಡ ಪುಣ್ಯಫಲ'. ಆ ಪ್ರತಿಭೆ ಇಂದು ನಾಡಗಲ ಮನ್ನಣೆ ಪಡೆಯುತ್ತಿರುವಾಗ, ಮನೆಯ ಉಡುಗೊರೆಯೆಂದು ಮನೋಹರ ಗ್ರಂಥಮಾಲೆ ತನ್ನ ಈ ಕಾಣಿಕೆಯನ್ನು ಅವರಿಗೆ ಸಮರ್ಪಿಸುತ್ತಲಿದೆ. ವಿನಾಯಕರಂತೆಯೇ ನಮ್ಮ ಗ್ರಂಥಮಾಲೆಯೂ 'ಗುಂಪಿ'ನ ಸಿದ್ಧಿಗಳಲ್ಲೊಂದಾಗಿದೆ.

ಒಂದು ದೃಷ್ಟಿಯಿಂದ ಈ ಪುಸ್ತಕ ವೈಶಿಷ್ಟ್ಯಪೂರ್ಣವಾಗಿದೆ. ಇದರಲ್ಲಿಯ ಬರೆಹಗಾರರೆಲ್ಲ (ಶ್ರೀ. ಬೇಂದ್ರೆಯವರೊಬ್ಬರನ್ನು ಬಿಟ್ಟು) ಯುವಕರು, ಹೊಸ ಪೀಳಿಗೆಯವರು. ಹಳೆಯಕಾಲದ ಸಾಹಿತ್ಯದ ಬೆಳೆ, ಇವರ ವಿಮರ್ಶೆಯ

ಉತ್ಸಾಹದ ಗಾಳಿಯಲ್ಲಿ ಶುದ್ಧವಾಗುತ್ತಿರುವ ಸಂಗತಿ ಆಶಾದಾಯಕವಿಷ್ಟೇ
ಅಲ್ಲ, ಹೊಸ ಆರೋಗ್ಯದ ಚಿಹ್ನವೂ ಆಗಿದೆ. ಇದರಲ್ಲಿಯ ಎಲ್ಲ ಲೇಖನಗಳ
ಹಿಂದೆಯೂ ಆಳವಾದ ಅಭ್ಯಾಸವಿದೆ, ಕೃತಿಯ ಬಗ್ಗೆ ಗೌರವವಿದೆ, ಸತ್ಯವನ್ನ
ದುರಿಸುವ ಧೈರ್ಯವಿದೆ; ಎಲ್ಲಕ್ಕೂ ಹೆಚ್ಚಾಗಿ ವಿಮರ್ಶೆಯ ಜೀವಂತ ದೃಷ್ಟಿಯಿದೆ
ಇವು ತತ್ಕಾಲೀನ ಹುರುಪಿನಲ್ಲಿ ಹಾರಿದ ಕಿಡಿಗಳಲ್ಲ, ಸಾಹಿತ್ಯರಸಿಕತೆಯ ಪ್ರಜ್ಞೆ
ಯಲ್ಲಿ ಬೆಳಗುವ ಜ್ಯೋತಿಗಳಾಗಿವೆ.

ಸಕಾಲದಲ್ಲಿ ಈ ಪುಸ್ತಕ ಪ್ರಕಟನೆಯಾಗಬೇಕೆಂಬ ನಿಶ್ಚಯದಿಂದ ಇದರ
ಭಾರವನ್ನು ಹೊತ್ತ ಸಂಪಾದಕರ ಅವಸ್ಥೆಯನ್ನು ದೇವರೇ ಬಲ್ಲ! ಇನ್ನೂ ಬ
ಬೇಕಾದ ಲೇಖನಗಳು ಹೊತ್ತಿಗೆ ಬಾರದ್ದರಿಂದ, ವಿಷಾದದಿಂದ ಅವುಗಳನ್ನು
ಬಿಡಬೇಕಾಯಿತು. ವಿನಾಯಕರ ಪತ್ರ, ದಿನಚರಿ ಹಾಗೂ ಪ್ರವಾಸಸಾಹಿತ್ಯ
ವನ್ನು ಕುರಿತಾದ ವಿಮರ್ಶೆಯನ್ನು ಪ್ರಕಟಿಸುವದು ಸಾಧ್ಯವಾಗಿಲ್ಲ. ವಿನಾಯಕ
ಗೆಳೆಯರಲ್ಲೊಬ್ಬರಾದ ಜಡಭರತರು ತಾವು ಕಂಡ ಕನಸುಗಳಲ್ಲಿ ವಿನಾಯಕರನ್ನು
ಉಲ್ಲೇಖಿಸಿದ ಸಂದರ್ಭಗಳನ್ನೆಲ್ಲ ಅವರ ಹಸ್ತಪ್ರತಿಗಳಿಂದ ಆಯ್ದು ಅದರಿಂದ
ಎದ್ದು ಬರುವ ಆ ನಿಲುವಿಗೆ, ಜಿ. ಬಿ-ಇಬ್ಬರ ಪರಿಚಿತನೂ ಪ್ರಕಾಶಕನೂ ಆಗಿ
ಕಂಡ ಬೇರೊಂದು ಯಥೋಚಿತ ಆವರಣವನ್ನೂ ಜೋಡಿಸಿ ಕೊಡುವ ವಿಚಾ
ಇತ್ತು. ಅದನ್ನೂ ಇದರಲ್ಲಿ ಸೇರಿಸಲಾಗಲಿಲ್ಲ. ಇವಿಷ್ಟನ್ನು ಸೇರಿಸಿದ್ದರೆ ಸಂಕಲ್ಪಿತ
ಯೋಜನೆಯಂತೆ ಈ ಸಾಹಿತ್ಯಸಮೀಕ್ಷೆ ಪೂರ್ಣವಾಗುತ್ತಿತ್ತು. ಈ ಕೊರತೆ
ನಮ್ಮನ್ನು ಬಾಧಿಸುತ್ತಿದ್ದರೂ ಇದರಲ್ಲಿ ಬಂದಷ್ಟೇ ಲೇಖನಗಳು ಸತ್ವಪೂರ್ಣ
ವಾಗಿರುವದರಿಂದ ಮತ್ತು ಹಿಂದಮಾತಾ ಮುದ್ರಣಾಲಯದ ಒಡೆಯರಾದ
ಶ್ರೀ. ಎಂ. ಎ ಕಾಮತ ಮತ್ತು ಅವರ ಕೆಲಸಗಾರರು ಎರಡೇ ದಿನಗಳಲ್ಲಿ ರಾತ್ರಿ
ಹಗಲು ಕೆಲಸ ಮಾಡಿ ಈ ಗ್ರಂಥ ಹೊತ್ತಿಗೆ ಹೊರಡುವಂತಾಯಿತಲ್ಲ ಎಂ
ಸಮಾಧಾನ ಆ ಕೊರತೆಯನ್ನೂ ಸ್ವಲ್ಪಮಟ್ಟಿಗೆ ಮರೆಯಿಸಿದಂತಾಗಿದೆ. ನನ್ನ
ಚಿತ್ರಹಿಂಸೆಗಳನ್ನೆಲ್ಲ ತಡೆದುಕೊಂಡು ಅಲ್ಪಾವಕಾಶದಲ್ಲಿಯೆ ತಮ್ಮ ಲೇಖನ
ಗಳನ್ನು ಬರೆದುಕೊಟ್ಟ ಸ್ನೇಹಿತರಿಗೆ, ವಿಶೇಷತಃ ನನ್ನ ಸಹವಾಸದಲ್ಲಿಯೆ
ಇದ್ದುದರ ಫಲವಾಗಿ ನಾನು ಕೊಟ್ಟ ನಾನಾ ತರಹದ ಹಿಂಸೆಗಳನ್ನೆಲ್ಲ ಸಹಿಸಿ
ಕೊಂಡು, ರಾತ್ರಿ ಎಂದರೆ ರಾತ್ರಿ, ಹಗಲು ಎಂದರೆ ಹಗಲು ನನ್ನ ಈ ಕೆಲಸದಲ್ಲಿ

ಸರ್ವರೀತಿಯಿಂದಲೂ ಸಹಾಯ ಸಲ್ಲಿಸಿದ ಶ್ರೀ ಕೆ. ಡಿ. ಕುರ್ತಕೋಟಿಯ ವರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೆನೆ.

ಶ್ರೀ. ವಿನಾಯಕರು ಈಗಾಗಲೆ ಖ್ಯಾತನಾಮ ವಿಮರ್ಶಕರಲ್ಲೊಬ್ಬರು. ಕೃತಿಪರೀಕ್ಷೆಯ ಸಹಜದೃಷ್ಟಿಯನ್ನು ಪಡೆದಿರುವ ಅವರು ಈ ಕೃತಿಯನ್ನು ಮೆಚ್ಚದಿರಲಾರರೆಂಬ ಭರವಸೆಯಿಂದ ಈ ಸಣ್ಣ ಪುಸ್ತಕವನ್ನು ಗ್ರಂಥಮಾಲೆಯ ಹಾರ್ದಿಕ ಶುಭಾಶಯುಗಳೊಂದಿಗೆ ಅವರಿಗೆ ಸಮರ್ಪಿಸುತ್ತಲಿದ್ದೇನೆ.

ಈ ಪ್ರಸಂಗವಿಶೇಷದಿಂದ ಹುಟ್ಟಿದ ಈ ಗ್ರಂಥವನ್ನು ಇದೇ ರೀತಿಯಾಗಿ ಮುಂದೆ ಬರಲಿರುವ ಸಾಹಿತ್ಯಸಮೀಕ್ಷೆಯ ಒಂದು ಗ್ರಂಥಮಾಲೆಯ ಮೊದಲ ನೆಯ ಗ್ರಂಥವನ್ನಾಗಿ ಮಾಡಿ, ಕನ್ನಡದ ಇನ್ನೂ ಅನೇಕ ಸಾಹಿತಿಗಳ ಸಾಹಿತ್ಯ ಸಮೀಕ್ಷೆಯನ್ನು ಈ ಗ್ರಂಥಮಾಲೆಯಲ್ಲಿ ಕ್ರಮಶಃ ಪ್ರಕಟಿಸಿ, ಪ್ರಾರಂಭ ವಾಗುವ ವಿಮರ್ಶಾಯುಗಕ್ಕೆ ದಾರಿ ಮಾಡಿಕೊಡುವ ಹಂಬಲವಿದೆ, ರಸಿಕರ ಸಹಕಾರ ದೊರೆತರೆ. ದೊರೆತೀತೆಂಬ ಭರವಸೆಯೂ ಇದೆ. ಆ ದಿಶೆಯಲ್ಲಿ ಕಾರ್ಯ ಪ್ರಾರಂಭವೂ ಆಗಿದೆ.

— ಜಿ. ಬಿ. ಜೋಶಿ

*

# ವಿನಾಯಕರ ಸಾಹಿತ್ಯ

**ಕಾವ್ಯ :**

ಕಲೋಪಾಸಕ
ಪಯಣ
ಸಮುದ್ರಗೀತಗಳು
ಆಕಾಶಗಂಗೆ
ಅಭ್ಯುದಯ
ಹಿಗ್ಗು
ನವ್ಯಕವಿತೆಗಳು
ಬಾಳದೇಗುಲದಲ್ಲಿ
ಉಗಮ
ದ್ಯಾವಾಪೃಥಿವೀ
The Song of Life.

**ಕಾದಂಬರಿ**

ಸಮರಸವೇ ಜೀವನ

**ನಾಟಕ :**

ಜನನಾಯಕ
ಯುಗಾಂತರ
ವಿಮರ್ಶಕವೈದ್ಯ
ತುಳಸಿ (ಕೋಳ್ಮಿಂಚಿನಲ್ಲಿ)

**ವಿಮರ್ಶೆ :**

ಚೆಲುವಿನನಿಲುವು
ಸಾಹಿತ್ಯದಲ್ಲಿ ಪ್ರಗತಿ
ಕನ್ನಡ ಕಾವ್ಯದ ಗೊತ್ತು ಗುರಿಗಳು
ನವ್ಯತೆ ಹಾಗೂ ಕಾವ್ಯಜೀವನ
ಕವಿಕಾವ್ಯಮಹೋನ್ನತಿ
Poetic Approach to Language
Bendre and his Poetry

**ಇತರ**

ಸಮುದ್ರದಾಚೆಯಿಂದ
ಇಂದಿನ ಕರ್ನಾಟಕ
ಜೀವನ ಪಾಠಗಳು

# ಪರಿವಿಡಿ

## ಸಾಹಿತ್ಯಸವಿಾಕ್ಷೆ ಗ್ರಂಥಮಾಲೆಯಲ್ಲಿ

### ಬರಲಿರುವ ಸಾಹಿತಿಗಳು

ಶ್ರೀನಿವಾಸ ★ ಬಿ. ಎಂ. ಶ್ರೀ.

ದೇವುಡು ಡಿ. ವಿ. ಜಿ.

ಅ. ನ. ಕೃ. ಕೈಲಾಸಂ

ರಾಜರತ್ನಂ ಕು. ವೆಂ. ಪು

ಮುಗಳಿ ಮಧುರಚೆನ್ನ

ಶ್ರೀರಂಗ ಕಾರಂತ

ಗಳಗನಾಥ ಗೋವಿಂದ ಪೈ.

ಗೆಳೆಯರಗುಂಪು ನವ್ಯರು

ಅಂಬಿಕಾತನಯದತ್ತ

ಶಾಂತಕವಿ

ಶ್ರೀನಿವಾಸಸುತ

ಆನಂದಕಂದ



# ಕವಿ ಬೇಂದ್ರೆಯವರ ಮಾತು*

ಮಿತ್ರರೇ, ರಸಿಕರೇ, ಆಮಂತ್ರಿತ ಸದ್ಗೃಹಸ್ಥರೇ,

ತಾವೆಲ್ಲ 'ಬಾಳದೇಗುಲದಲ್ಲಿ' ಎಂಬ 'ಹಿರಿಗಬ್ಬ'ದ ಹೊತ್ತಿಗೆಯ ಪ್ರಕಾಶನಸಮಾರಂಭಕ್ಕಾಗಿ ಆಮಂತ್ರಿತರಾಗಿ ಬಂದಿದ್ದೀರಿ. ನಾನೂ ಕೂಡ ಹಾಗೆಯೇ ಆಮಂತ್ರಿತನಾಗಿ ಪ್ರಕಾಶಕರಿಂದಲೂ ಗ್ರಂಥಕರ್ತರಿಂದಲೂ ನಿಯೋಜಿತನಾಗಿ ಈ ಕೆಲಸ ಕೈಕೊಂಡು, ಈ ಸ್ಥಳವನ್ನು ಆಕ್ರಮಿಸಿದ್ದೇನೆ. ಈ ಕೆಲಸ ಮುಗಿದೊಡನೆ ತಮ್ಮ ಜೊತೆಗೆ ಸೇರಿಕೊಂಡು ಸಮಾರಂಭದ ಇತರ ಅಂಗಗಳ ಸೇವನೆ ಮಾಡುತ್ತೇನೆ. ಅವರೆಗೆ ಈ ಗ್ರಂಥದ ಉದ್ಘಾಟನೆಯ ನಿಮಿತ್ತದಿಂದ ನಾನು ಹೇಳುವ ನಾಲ್ಕು ಮಾತುಗಳನ್ನು ಹೃದಯದ ಔದಾರ್ಯದಿಂದಲೂ ತಮ್ಮ ಉತ್ತಮಿಕೆಯ ಸೈರಣೆಯಿಂದಲೂ ಕೇಳಿಕೊಳ್ಳುವಿರೆಂದು ನಂಬಿದ್ದೇನೆ. ಅಸಮಾಧಾನದಿಂದ, ನಾನೇನಾದರೂ ಅಪ್ರಸ್ತುತವೆನಿಸುವ ಅಧಿಕೋಕ್ತಿಗಳನ್ನಾಡಿದೆನೆಂದು ತಮಗೆಲ್ಲರಿಗೋ, ಕೆಲವರಿಗೋ, ಒಬ್ಬಿಬ್ಬರಿಗೋ ತೋರಿದರೆ, ಅವುಗಳನ್ನು ಅವರು ನನ್ನ ಕೇವಲ ಸ್ವಗತಗಳೆಂದೋ, ಹೆಚ್ಚಾದರೆ ಜನಾಂತಿಕ

* ಶ್ರೀ. ವಿನಾಯಕರ "ಬಾಳದೇಗುಲದಲ್ಲಿ" ಎಂಬ ಗ್ರಂಥ ಪ್ರಕಾಶನ ಸಮಾರಂಭವನ್ನು ಮನೋಹರ ಗ್ರಂಥಮಾಲೆಯ ಕಾರ್ಯಾಲಯದಲ್ಲಿ ದಿನಾಂಕ ೨೮-೫--೧೯೫೩ರಂದು ಸಾಯಂಕಾಲ ಏರ್ಪಡಿಸಿದಾಗ ಉದ್ಘಾಟಕರಾಗಿ ಶ್ರೀ. ದ. ರಾ. ಬೇಂದ್ರೆಯವರು ಬರೆದು ಓದಿದ ಅವರ ಅಪ್ರಕಟಿತ ಭಾಷಣ.

ಗಳಿಂದೋ, ಅದೂ ಬೀರಿದರೆ ಆಕಾಶಭಾಷಿತಗಳಿಂದೋ ತಿಳಿದು ಸಹೃದಯ
ಪ್ರೇಕ್ಷಕರಂತೆ ಯುಕ್ತವಾದ ಉಪೇಕ್ಷೆಯಿಂದ ನೋಡುವರೆಂದು ಭಾವಿಸುತ್ತೇನೆ.

ಶ್ರೀಅರವಿಂದರ ಮತ್ತು ಶ್ರೀಮಾತೆಯವರ ಆಶೀರ್ವಾದದ ಆಶ್ರಯದಲ್ಲಿ
ಮೂಲತಃ ಈ ಪ್ರಕಾಶನವಾಗುತ್ತಿರುವದರಿಂದ ನಾನೂ ಈ ಉದ್ಘಾಟನಾ
ಕಾರ್ಯವನ್ನು ಒಪ್ಪಿಕೊಂಡಿದ್ದೇನೆ. ಆದ್ದರಿಂದಲೇ ಆಗುವದೆಲ್ಲ ಕಲ್ಯಾಣ-
ಮುಖವಾಗುವದೆಂದೂ ನಂಬಿದ್ದೇನೆ. ನನ್ನ ಪ್ರಸ್ತಾವನೆಯು ಸೆರಗು ಇನ್ನೂ
ಬೆಳೆಯುತ್ತಿರುವ ಕಾರಣವೆಂದರೆ, ಪ್ರಕಾಶಿತವಾಗಲಿರುವ ಕಾವ್ಯದ ಕವಿಗಳು
ಶ್ರೀಯುತ Principal Proffessor ಗೋಕಾಕವರು ನನಗಿಂತ ಉದಾ
ಮತವಾದಿಗಳು; ಅವರ ಕೀರ್ತಿಯು ವ್ಯಾಪ್ತಿ ದೊಡ್ಡದು. ಅವರಿಗೆ ಬೇಕಾದ
ವರೂ, ಅವರು ತಮಗೆ ಬೇಕು ಎಂದು ಹೇಳವವರೂ ಅನೇಕಾನೇಕ.
ಇನ್ನೊಂದು ದೃಷ್ಟಿಯಲ್ಲಿ ಈ ಕಾವ್ಯದ ಪ್ರಕಾಶಕರಾದ ಶ್ರೀ. ಗೋವಿಂದಾ-
ಚಾರ್ಯ ಜೋಶಿಯವರು ಸುಮಾರಾಗಿ ವಿಶ್ವಸಂಸಾರಿಗಳು. ಅವರನ್ನು ಕಂಡ
ಬೇಡ ಎನ್ನುವವರು ಆಗೀಗ ಹಲವರಿರಬಹುದಾದರೂ, ಅವರಾಗಿ ಯಾರನ್ನೂ
ಬೇಡ ಎಂದು ತಮ್ಮ ದೃಷ್ಟಿಪಥದಿಂದ ತಳ್ಳುವದಿಲ್ಲ. ಅಂಥ ಸಂಗ್ರಾಹಕವಾ
ಮಾರ್ಗ ಅವರದು. ಆದರೂ, ಹೀಗಿದ್ದರೂ, ಈ ಇಬ್ಬರೂ ನನ್ನ ಮಿತ್ರರ
ಗೆಳೆಯರೂ ಆಗುವ ವೈಶಾಲ್ಯ ನನ್ನ ಸಣ್ಣ ಹಾದಿಯಲ್ಲಿ ಇನ್ನೂ ಉಳಿದ
ಕೊಂಡಿದೆ. ಅದು ನನ್ನ ಭಾಗ್ಯ. ಆ ಭಾಗ್ಯದ ಭಾಗವಾಗಿ ನನ್ನ ಗೆಳೆಯರ ಮೂಲ
ನನ್ನ ವಿಶ್ವಕ್ಕಿಂತ ಭಿನ್ನವಾದ ಅನೇಕ ವಿಶ್ವಗಳು ನನಗೆ ಗೋಚರವಾಗುತ್ತವೆ
ಅವುಗಳ ದೃಷ್ಟಿಗೂ ನಾನು ಬೀಳುತ್ತೇನೆ. ಅಂಥ ಹಾರ್ದಿಕವಾದ ಸುಪ್ರಸಂ
ವಿದು ಎಂದು ನಾನು ತಿಳಿದಿರುವದರಿಂದಲೇ ನಾನೂ ಮನ ಬಿಚ್ಚಿ ಮಾತಾಡುತ್ತಿ
ದ್ದೇನೆ; ಆ ಮಾತನ್ನು ಬರೆವಣಿಗೆಯಲ್ಲಿ ಸೇರಿಸುತ್ತಿದ್ದೇನೆ. ಆಡಿದ್ದನ್ನು ಕೇಳ
ವದು ಜ್ಞಾನಮಾರ್ಗಕ್ಕೆ ಸೇರಿಸಬಹುದಾದರೂ, ಅನಿಸಿದ್ದನ್ನು ಆಡುವದು ಕಮ
ಮಾರ್ಗವೇ ಸರಿ. ಆಡುವದು ನನ್ನ ಕರ್ಮ, ಕೇಳುವದು ನಿಮ್ಮ ಧರ್ಮ. ಆಮೇ
ಗ್ರಾಹ್ಯಾಗ್ರಾಹ್ಯ ವಿಚಾರ ಮಾಡುವದು ಅವರವರ ವಿವೇಕದ ಅವಿವೇಕ
ಜಾತಿಗೆ ಸೇರಿದ ಮಾತು. ಅದು ಶುದ್ಧ ಏಕಾಂತದ ವೈಯಕ್ತಿಕವಾದ ಮಾತು.

ನನಗೆ ನೆನಪಿದೆ, ಇಂದಿನ ಸಮಾರಂಭ "ಬಾಳಪೇಗುಲದಲ್ಲಿ" ಎಂ
ಕಾವ್ಯದ ಉದ್ಘಾಟನೆಯು ಬಗ್ಗೆ ಎಂದು. ಪರ್ಯಾಯವಾಗಿ ನಾನು ಅದ

ಉದ್ಘಾಟನೆಗೆ ಈಗಾಗಲೇ ಪ್ರಾರಂಭಿಸಿಬಿಟ್ಟಿದ್ದೇನೆ ಎಂದು ಸೂಜ್ಞರಾದ ತಮ್ಮ ಲಕ್ಷ್ಯದಲ್ಲಿ ಬಂದಿರಬಹುದು. ಈ ದೇಗುಲದ ಕೆಲವು ಭಾಗಗಳ ದರ್ಶನವು ಈ ಪೂರ್ವದಲ್ಲಿ ಕೇವಲ ಸಾಹಿತಿಗಳಿಗೂ, ವಿಶೇಷವಾಗಿ ಚಿಕಿತ್ಸಕರು ಎಂದೆನಿಸುವ ವಿಮರ್ಶಕರಿಗೂ ಆಗಿದೆ, ಆಗಿರಬೇಕು. ಅಗಳು ಹಿಚುಕಿ ಅನ್ನದ ಪರೀಕ್ಷೆ ಮಾಡಬಲ್ಲ, ಬೆಲೆ ಕಟ್ಟಬಲ್ಲ ಪಂಡಿತರಿಗೆ ಇಂಥ ಕೆಲಸ ಹೊಸದಲ್ಲ. ಕಾವ್ಯ ಪ್ರಕಾಶನನಿಮಿತ್ತದಿಂದ ನಾನು ಹೇಳುವ ಮಾತುಗಳಲ್ಲಿ ಕೆಲವು ಅಂಥ ಪಾಂಡಿತ್ಯಕ್ಕೆ ಹೊರತಲ್ಲ. ಉಳಿದವರಲ್ಲಿ ಕೆಲವು ನನ್ನ ಸ್ವಭಾವಕ್ಕೆ ಸೇರಿದವುಗಳು. ಬಾಳಿಯೇ ಬಾಳನ್ನು ತಿಳಿದುಕೊಳ್ಳಬೇಕಾಗುವದು. ಈ ತಿಳಿವಿನ ಬೆಳವಣಿಗೆಯೇ ಬಾಳಿನ ಬೆಳವಣಿಗೆ. ಬಾಳುವದು ಬೆಳೆಯುತ್ತದೆ; ಬೆಳೆಯುವದು ಬಾಳುತ್ತದೆ. ಬೆಳವಣಿಗೆ ನಿಂತ ಮೇಲೆ ಆದರ ಹಿಂದಿನ ಬಾಳು ಶೂನ್ಯ. ಶ್ರೀ. ವಿನಾಯಕ ಗೋಕಾಕರವರ ಬೆಳೆಯುವ ಬಾಳಿನ, ಮತ್ತು ಬಾಳಿನ ಬೆಳವಣಿಗೆಯ ಫಲ ಈ ಕಾವ್ಯ. ಅದರ ಬಂಗಾರಬಣ್ಣದ ಗುಣ, ಯಾವ ಬಗೆಯದೆಂಬುದನ್ನು ವಾಚಕರು, ತಮ್ಮ ತಮ್ಮ ಬಾಳಿನ ಬಣ್ಣದೊಡನೆ ಸರಿದೂಗಿ ನೋಡಿ, ತಾವೂ ಮತ್ತೆ ಬಾಳಬೇಕು, ಮತ್ತೆ ಬೆಳೆಯಬೇಕು; ಗತಕಾಲದ ಭೂತಗಳೊಡನೆ ಗುದ್ದಾಡಿ ವರ್ತಮಾನದ ಸತ್ಯ ಹಿಂಡಿ ಹಿಪ್ಪೆಮಾಡಿ, ಭವಿಷ್ಯತ್ತಿಗೆ ಬರಿ ಸಿಪ್ಪೆಯ ಹೊರತು ಏನೂ ಉಳಿಯದಂತೆ ಸ್ಮಶಾನಕುರುಕ್ಷೇತ್ರದ ಮಾರ್ಗ ಹಿಡಿಯಬಾರದು. ಬಾಳು, ದೇಗುಲವೆಂಬ ಅರಿವು ಬೇಕು. ಆ ಅರಿವಿನ ಸೊಡರು ಈ ಕಾವ್ಯ. ನನ್ನ ಬಾಳಿನ ಕುಡಿಬೆಳಕಿನಲ್ಲಿ ಈ ಸೊಡರಿನ ಪ್ರಭಾವಳಿ ನನಗೆ ತೋರುವ ಬಗೆಯನ್ನು ಸಸ್ಯ ಹೇಳಬೇಕಾದುದು ಉಚಿತ.

ದೇಹ-ದೇಗುಲ ಕಟ್ಟಿದವರುಂಟು. ವಿಶ್ವ-ದೇಗುಲ ಕಂಡವರುಂಟು. ಬಾಳ-ದೇಗುಲದ ವಾಸ್ತುಶಿಲ್ಪಕ್ಕೆ ಕೈಹಾಕುವ ವಿಶ್ವಕರ್ಮರ ಕೈಯು ಗೆರೆಯೇ ಬೇರೆ. ಅಣ್ಣ ಮಾಸ್ತಿಯವರ ಅಂದರೆ ಶ್ರೀ. ಶ್ರೀನಿವಾಸರ 'ನವರಾತ್ರಿ'ಯು ಇದೇ ಬಗೆಯ ಆದರೆ ಬೇರೆ ಬೆಡಗಿನ ಮಹಾಕಾವ್ಯ. ಶ್ರೀ. ಗೋಕಾಕರೇ ಬರೆದು ಮುಗಿಸಲಿರುವ "ಸಮರಸವೇಜೀವನ" ಎಂಬ ಕಾದಂಬರೀ ಮಾಲೆಯು ಮಹಾಕಾವ್ಯದ ಮತ್ತೊಂದು ವಿಭೂತಿ. "All life is yoga" ಎಂದರು ಶ್ರೀಅರವಿಂದರು; "ಪುರುಷೋವಾವಯಜ್ಞಃ" ಎಂದುಸುರಿದನು ಛಾಂದೋಗ್ಯದ ಋಷಿ ಬಾಳ ಬಟ್ಟೆಯಲ್ಲಿ ಪರಮಾಗಮದ ದರ್ಶನವನ್ನು ಕಂಡವರು ಕನ್ನಡದಲ್ಲಿ ಆಗಿ

ಹೋದರು. ಇಂದು ಸ್ವಶಾಸನೋನ್ಮುಖ ಪ್ರಪಂಚವನ್ನು ಅದರಷ್ಟಕ್ಕೆ ಬಿಟ್ಟು
ಬಾಳಿನ ಪ್ರಸ್ತಾರಭೂಮಿಯಲ್ಲಿ ದೇಗುಲದ ವಾಸ್ತುವನ್ನು ಕಂಡು, ಕಂಡ
ದನ್ನು ಕಂಡರಿಸಿ ಉಳಿದವರಿಗೂ ಅದು ಕಂಗೊಳಿಸುವಂತೆ ಮಾಡುವ ಆಗ
ಅಷ್ಟಿಷ್ಟಲ್ಲ. ಆ ಮುಂಚೂಣಿಯ ಗುಂಪಿಗೆ 'ವಿನಾಯಕ'ರು ಸೇರಿದ್ದಾರೆ. ಸ್ವಂ
ದೇಹದಲ್ಲೇನು, ವಿಶಾಲ ವಿಶ್ವದಲ್ಲೇನು ದೇಗುಲದ ಸಂಸ್ಥಿತಿಗೆ ಅವಕಾಶವುಂಟೆಂ
ಅನುಭವಿಸಿದರೆ ಮಾತ್ರ ಬಾಳಿನ ಬಯಲಿನಲ್ಲಿ ಜೀವನದ ದೇಗುಲವನ್ನು ಕಟ
ಬಹುದು; ಕಟ್ಟಡವನ್ನು ನಿಲ್ಲಿಸಬಹುದು. ಮೂರ್ತಿಗಳನ್ನೆಲ್ಲ ಮುಕ್ಕು ಮಾ
ಆಲಯಗಳನ್ನು ಬಯಲು ಮಾಡಿ ತಾವು ಯುಗಪ್ರತಿನಿಧಿಗಳಾದ ಕಾಲಪುರು
ರೆಂದು ಹೆಮ್ಮೆ ಪಡುವವರಿಗೆ ಮಸಣವೇ ಸ್ಮಾರಕ. ಅದರಿಂದ ಹೊಸ ಜಗ
ಒಂದು ಹರವುಕ್ಷೇತ್ರ ಸಿಕ್ಕುವದೆಂಬ ಅನಪೇಕ್ಷಿತ ಲಾಭವೊಂದೇನೋ ಇ
ಆದರೆ ಕಟ್ಟಡದ ಕಲ್ಪಕನಾದ ಕೆಂಪೇಗೌಡನು ಬರುವವರೆಗೂ, ಬಾಳಿನಲ್ಲಿ ದೇ
ನನ್ನು ಕಾಣುವ ಗ್ರಹಮೇಧಿಗಳು ಬರುವವರೆಗೂ ಬೆಂಗಳೂರೊಂದು ಬೆಂಗಾಡು
ಕರ್ಣಾಟಕವು ಮಹಾಕಾಂತಾರ, ದಂಡಕಾರಣ್ಯ. ನಮ್ಮ ನಿಮ್ಮೆಲ್ಲರ ಪು
ದಿಂದ ಶ್ರೀ. ವಿನಾಯಕರಿಗೆ ಕನ್ನಡದಲ್ಲಿ ಬಾಳದೇಗುಲವು ಕಂಡಿದೆ. ಅದರ
ಅನೇಕ ಕಂಬಗಳನ್ನು ನಿಲ್ಲಿಸಿದ್ದಾರೆ, ವಿವಿಧ ಮೂರ್ತಿಗಳನ್ನೂ ಸ್ಥಾಪಿಸಿದ್ದಾ
ಪ್ರಾಕಾರದ ಪ್ರಪಂಚವನ್ನು ಯಥಾಸೂತ್ರವಾಗಿ ಇಂಬಾಗಿ ಬೆಳೆಸಿದ್ದಾರೆ. ಜ
ನೋನ್ನತಿಯ ಸಪ್ತಭೌಮಿಕವಾದ ಸೋಪಾನವನ್ನು ತಮ್ಮದೇ ಆದ ಬಾಳ
ಬಂಡೆಗಲ್ಲಿನಲ್ಲಿ ಕಟೆದಿದ್ದಾರೆ.

ವಿದ್ಯಾರ್ಥಿ, ಕೌಟುಂಬಿಕ, ಗೆಳೆಯ, ಕನ್ನಡಿಗ, ಸಾಹಿತಿ, ಜೀವನ
ಪಯಣಿಗ — ಈ ಮಂಡಲಗಳಲ್ಲಿ ಗೋಕಾಕರವರು ಬಾಳಿದ ಬಾಳು, ತೆರೆ
ಮರೆಯಲ್ಲೇನೂ ಇಲ್ಲ. ಎಲ್ಲೆಡೆಗೂ ಅವರ ಸತ್ವಪರೀಕ್ಷೆ ಮುಗಿದಿದೆ ಎಂ
ನಾನು ಹೇಳಲಾರೆ. ಅವರು ಬರಿಯ ಪ್ರೊಫೆಸರ್‌ರೋ ನಿಜವಾದ ವಿದ್ಯಾರ್ಥಿ
ಗಳೋ ಎಂಬ ಪರೀಕ್ಷೆ ಅವರ ಜೀವನೋದ್ಯೋಗದಲ್ಲಿಯೇ ಸೇರಿಹೋಗಿ
ಅವರು ಪ್ರಥಮ ತರಗತಿಯಲ್ಲಿ ತೇರ್ಗಡೆಹೊಂದುತ್ತ ಬಂದುದು ಅಂಥ ದೊ
ಮಾತೇನೂ ಅಲ್ಲ. ಯಾಕೆಂದರೆ, ಪ್ರತಿ ವರ್ಷವೂ ಪರೀಕ್ಷೆ ನಡೆದಲ್ಲೆಲ್ಲ ಯಾ
ದರೂ ಅಗ್ರಗಣ್ಯರಾಗಿಯೇ ಇರುತ್ತಾರೆ. ಅವರ ಕೌಟುಂಬಿಕ ಸತ್ವಪರೀಕ್ಷೆಯ
ಅಸಾಮಾನ್ಯವಾದರೂ ಸಾಮಾನ್ಯವೇ ಆಗಿವೆ. ಸತ್ವ ನೋಡಬೇಕಿದ್ದರೆ ಅ

ಕೌಟುಂಬಿಕ ಪರಿವಾರ? ಗೆಳೆತನ ಅವರನ್ನು ತಿಕ್ಕಿ ನೋಡದೆ ಬಿಡುತ್ತಿಲ್ಲ. ಶರಣನ ಪರೀಕ್ಷೆ ಮರಣದ ವರೆಗೆ ಎಂದಂತೆ ಗೆಳೆತನವೆಂಬ ಬಾಂಧವ್ಯದ ರೀತಿ. ಅವರು ಕನ್ನಡಿಗರೆಂದು ಕೊಡಬೇಕಾದ ಪರೀಕ್ಷೆ ಹಲವು ದೇಶಭಾಷಾರಂಗಗಳಲ್ಲಿ ತಿರುಗಾಡಿ ಬಂದಿದೆ. ಕರ್ನಾಟಕದಲ್ಲಿಯೂ ಅದರ ಪರೀಕ್ಷೆ ನಡೆಯುತ್ತಿದೆ. ಮತ್ತೆ ಎಂದಾದರೂ ದೇಶ ಬಿಡಬೇಕಾಗಿ ಬಂದಾಗ ಅದರ ರಂಗತಾಲೀಮಿನಾಟವು ಆಗಲೂಬಹುದು. ಈ ವರೆಗೂ ಅವರು ೮ ಕಾವ್ಯ, ೬. ನಾಟಕ, ೧ ಮಹಾ ಕಾದಂಬರಿ, ೫ ವಿಮರ್ಶೆ ಹೀಗೆ ಇತ್ಯಾದಿಯಾಗಿ ಒಂದು ಒಂದೊವರೆ ಡಝನ್ ಗ್ರಂಥಗಳನ್ನು ಪ್ರಕಟಿಸಿದ್ದರೂ — ಇದೇನು ಮಹಾ ಎಂದು ಗಂಭೀರ ಉಪೇಕ್ಷೆಯಿಂದ ಹತ್ತರ ಕೂಡ ಹನ್ನೊಂದೆಂಬಂತೆ ಲೆಕ್ಕಹಾಕುವ ಬುದ್ಧಿವಂತರ ಪ್ರತಿಷ್ಠಿತ ವರ್ಗವೊಂದು ಇಂದಿಗೂ ಇದೆ. ಇದಕ್ಕೂ ಹೆಚ್ಚು ಡಝನ್ನು ಗ್ರಂಥಗಳನ್ನು ಬರೆಬರೆದ ಒಳ್ಳೊಳ್ಳೆ ದೇವರು ಎಲ್ಲೋ ಉಳ್ಳಾಡುತ್ತಿರುವಾಗ ಈ ಬಾಳಸೀಗುಲದ ಮೇಲಿನ ಓತಿಕಾಟದ ಲೆಕ್ಕವೇ ಸಾಮಾಜಿಕರಿಗೆ? ಹೀಗಾಗಿ ಜೀವನದ ಪಯಣವು ಈ ಕವಿಗೆ ಕೇವಲ ಸುಖಮಯವಾಗಲಿಲ್ಲ. ಅದು ಯಾರಿಗೆ ಆಗಿದೆ? ಎಂದು ಮಹಾಮತಿಗಳು ಕೇಳಬಹುದು. ಯಾರಿಗೂ ಆಗಿಲ್ಲ, ಆಗುವಂತಿಲ್ಲ. ಆಗುವದಕ್ಕಾಗಿ ಇದರ ರಚನೆಯೆ ಇಲ್ಲ ಎಂದು ಇವರ ಅಭಿಪ್ರಾಯ. ಇಂಥ ಅಭಿಪ್ರಾಯದ ದುಃಖ ಬಿಟ್ಟರೆ, ಇಂಥವರ ಮಧ್ಯದಲ್ಲಿರುವವರ ಸುಖ ಇದು ಎಂಬ ಸಮಾಧಾನ ತಕ್ಕಮಟ್ಟಿಗೆ ಕವಿಯ ಪಾಲಿಗೂ ಬರದೇ ಹೋಗಿಲ್ಲ. ಇಷ್ಟೇ ಇವರ ಪಾಲಿನದಾಗಿದ್ದರೆ, ಜೀವನ ಒಂದು ಅಲಂಕಾರ ಎಂದು ತಿಳಿಯುವ ವ್ಯಮರ್ಶ-ಗ್ರಾಹಿಗಳಿದ್ದಾರೆ. ಆದರೆ ಇಲ್ಲಿಯ ಅಲಂಕಾರ ಯಾರಿಂದೋ ಮಾಡಿಸಿ, ಹೊರಗಿನಿಂದ ಧರಿಸುವ ಪ್ರಕಾರದ್ದಲ್ಲ; ಇಲ್ಲಿಯ ದರ್ಶನ ಗರ್ಭದಲ್ಲಿ ಕ್ರಮಃ-ವಾಗಿ ಮೂಡಿ ಬಂದದ್ದು ಎಂದು ಕೆಲವರಿಗಾದರೂ ತಿಳಿಯದೇ ಹೋಗಲಾರದು. ಆ ಕೆಲವರಿಂದ ಹಲವರಲ್ಲಿ ಇಲ್ಲಿಯ ಬಾಳು ಬೆಳದೀತು. 'ಬೆಳೆದು ಬಾಳ್' ಎಂದು ಪ್ರಕಟಿಸೀತು. ಈ ಹಸಿಹಂಬಲ ಇಲ್ಲಿಯ ದರ್ಶನದಲ್ಲಿದೆ ಎಂದು ನನ್ನ ದೃಷ್ಟಿಗೆ ಗೋಚರವಾದದ್ದನ್ನು ತಮ್ಮ ಕಣ್ಣಿಗೂ, ಕನ್ನಡಿಗರ ಕಿವಿಗೂ ಹಾಕುತ್ತಿದ್ದೇನೆ. ಉದ್ಘಾಟಕನು ಇದಕ್ಕೂ ಹೆಚ್ಚೇನು ಮಾಡಬಲ್ಲ? ಬೇರೆ ಯೇನು ಮಾಡಿಯಾನು? ಅಂತಃಪಟ ದೂರ ಮಾಡಿ ಮುಖಾಮುಖಿಯಾಗಿ ದರ್ಶನ ಮಾಡಿಕೊಳ್ಳುವ ಆಗತ್ಯವಿರುವಾಗ ತೆರೆಯ ಮರೆಯ ಮಾತುಗಳಿಂದ

ಪ್ರಯೋಜನವೇನು? ಖಡಾಖಂಡಿತವಾದ ಮಾತುಗಳು ಆಡ್ಡಾದಿಡ್ಡಿಯಾಗಿರಲೇ ಬೇಕೆಂಬ ನಿಯಮವೇನೂ ಇಲ್ಲ. ಆದರೆ ಸುತ್ತೂಕಡೆಗೂ ಸಮಾಜ ಹಬ್ಬಿಕೊಂಡಿರುವಾಗ ಯಾವ ಸರಳವು ಯಾರಿಗೆ ವಕ್ರವಾಗಿ ತೋರೀತೋ ಎಂದು ಮೊದಲೇ ಶ್ರಾವಕರ ಕ್ಷಮೆ ಕೋರಿದ್ದೇನೆ. ಅದರ ನೈಜ ನಾಳಿಗೂ ತಿಳಿಯಲೆಂದು ಮಾತನ್ನು ಬರೆವಣಿಗೆಗಿಳಿಸಿದ್ದೇನೆ. ಈ ಕಾವ್ಯಕ್ಕೂ, ಕವಿಗಳಿಗೂ, ಪ್ರಕಾಶಕರಿಗೂ, ಮುದ್ರಕರಿಗೂ ನನಗೂ ಘನಿಷ್ಟವಾದ ಸಂಬಂಧವಿರುವದರಿಂದ ನನ್ನ ಯಾವ ಪ್ರಶಂಸೆಯೂ ಆತ್ಮಪ್ರಶಂಸೆಯಂತೆ ತೋರುವದು ತೀರ ಸಹಜ. ಆದರೆ ನಾನು ಯಾವ ಅಪ್ರಶಸ್ತ ಕಾರ್ಯಕ್ಕೂ ತೊಡಗಿಲ್ಲವೆಂಬುದಕ್ಕೆ ತಮ್ಮೆಲ್ಲರ ಸಾಕ್ಷಿಯೇ ಸಾಕು. ತಮ್ಮ ಉಪಸ್ಥಿತಿಯ ಸೌಜನ್ಯವು ಉಳಿದೇನನ್ನೂ ಸೂಚಿಸದಿದ್ದರೂ ಇದೊಂದು ಸೊಬಗಿನ ಸಂದರ್ಭ, ಒಲವಿನ ಒಸಗೆ ಎಂಬ ತಮ್ಮ ಅನುಭೂತಿ ಇದ್ದರೆ ನನ್ನ ಸಹಾನುಭೂತಿ ಅದರಲ್ಲಿದೆ. ಕವಿಗಳು ತಮ್ಮ ಜೀವನಮಂಗಲವನ್ನು ದೇಗುಲವಾಗಿ ರೂಪಿಸಿದ್ದಾರೆ. ನಾವೂ ನಮ್ಮ ನಮ್ಮ ದೇಗುಲಗಳೊಳಗಿಂದ ನಮ್ಮ ದೃಷ್ಟಿಕಿರಣಗಳನ್ನು ಆ ಕೇಂದ್ರದತ್ತ ಬಿತ್ತರಿಸಿ ವಿಶ್ವವೈಭವಪ್ರಭಾವವನ್ನು ಹಿಗ್ಗಿಸುವಾ ನಮ್ಮ ನಿಮ್ಮ ಎಲ್ಲರ ಒಲವಿನ ಮಧ್ಯದಲ್ಲಿ ವಿನಾಯಕರ ನಿಲವು ಹಿಗ್ಗಿನದು. ಅವರ ಉಳಿದ ಬಾಳು ಬರವಣಿಗೆ ಅದಕ್ಕೆ ಬಾಹ್ಯಪ್ರಮಾಣ. ಅವರ ಬಾಳು ಹಿಗ್ಗಿದಂತೆ ಆ ಹಿಗ್ಗು ಬಾಳಿ ಕಾವ್ಯದ ಬದುಕಾಗಿದೆ. ಆ ಬದುಕು ಇಲ್ಲಿ ಗುಡಿಗಟ್ಟಿ ನಿಂತಿದೆ. ಇದು ಮಹಾಮಂಗಲವು. ಅವರ ಕೃತಿ ಮಂಗಲಾಕೃತಿ. ಈ ಉದ್ಘಾಟನೆಯಲ್ಲಿ ಅದಕ್ಕೆ ಆರತಿ ಎತ್ತಿದ್ದೇನೆ. ಈ ಪೂಜಾರಿಯ ಕೆಲಸದಲ್ಲಿ ಅನಾಯಾಸವಾಗಿ ನನಗೆ ಪೂಜಾರ್ಹತೆ ಬಂದಿದೆ.

ಇಂಥ ಮಾಂಗಲ್ಯಮಂದಿರದ ಉದ್ಘಾಟನೆಗೆ ನನ್ನನ್ನು ಮುಂದೆ ಮಾಡಿದುದಕ್ಕಾಗಿ ನಾನೇ ತಮಗೆ ಋಣಿಯಾಗಿದ್ದೇನೆ. ‘ಬಾಳದೇಗುಲದಲ್ಲಿ’ ಏನಿದೆ? ಎಂದು ಕುತೂಹಲವುಳ್ಳವರು ಅದರ ಪರಿವಿಡಿಯನ್ನು ನೋಡಿದರೂ ಸಾಕು. ಮುಂದೆ ಪ್ರಸ್ತಾವನೆ ಇದೆ–ಕವಿಗಳದೇ. ಅದಕ್ಕೂ ಮುಂದೆ ಕಾವ್ಯಾಂಗವಾಗಿಯೇ ದೇಗುಲದ ಕೀರ್ತಿಮುಖದಂತೆ ‘ಸಮರ್ಪಣೆ’ ಎಂಬ ಸುಸೂತ್ರವಾದ ಮಾರ್ಗದರ್ಶಿ ಇದೆ. ಇಲ್ಲಿಗೇ ಕುತೂಹಲ ತೀರದಿದ್ದರೆ, ಅಥವಾ ಮತ್ತೆ ಉದ್ದೀಪಿತವಾದರೆ ಎಲ್ಲ ಕಾವ್ಯವನ್ನೂ ತಾವು ಓದಿ ತಿರುವಿ ಹಾಕಬೇಕು. ಈ ದೇಗುಲ ಚಿಕ್ಕದಾಗಿ ಕಂಡರೆ ಅಂಥ ಸಾಮರ್ಥ್ಯವುಳ್ಳವರು ಇದಕ್ಕೂ ವಿಶಾಲವಾದುದನ್ನು ಕಟ್ಟ

ಬೇಕು. ಇದರ ಕಲ್ಲು ಹೊತ್ತು ಇನ್ನೊಂದರ ಅಸ್ತಿವಾರಕ್ಕೊ, ಗೋಡೆಗೋ ಹಾಕುವ ವಿಶ್ವಬಾಂಧವ್ಯದ ವಿನೂತನ ರೀತಿಯನ್ನು ನಾನು ಬೆಳಿಸಲಾರೆ. ಇರಲಿ. ಅಸ್ತಿತ್ವದ ದಶಮುಖವಿಸ್ತಾರಕ್ಕೂ, ಜೀವನದ ಚತುರ್ಮುಖ ಸಿದ್ಧಿಗೂ ನಡುವೆ 'ಏಳು' ಎಂದು ಎತ್ತುವ ಸೋಪಾನಮಾರ್ಗದ ನಿಲುಮೆಯೊಂದಿದೆ. ಅದು ಕಾವ್ಯದ ಬೀಜದರ್ಶನ. ಅದು ಪೂರ್ವದ ಬಿತ್ತು, ತುತ್ತು. ಬಾಳಿನ ನೆಲೆಯೇ ಮೇಲೇರದೆ ಮೇಲ್ಮಟ್ಟದ ಜೀವನವು ನೆಲೆಗೊಳ್ಳಲಾರದು. ಆ ಶ್ರದ್ಧೆಯ ಮುಂದಿರದಂತಿದೆ 'ಬಾಳದೇಗುಲ'. ಅದನ್ನು ಕೃತಿಯಲ್ಲಿಳಿಸಿ ಕವಿಗಳು ಕೃತಾರ್ಥರಾಗಿದ್ದಾರೆ. ಅದನ್ನು ಪ್ರಕಾಶಗೊಳಿಸಿ ಪ್ರಕಾಶಕರು ಭಾರ ಹೊತ್ತ ಶೇಷನಂತೆ ಧ್ಯಾನಜಡರಾಗಿದ್ದಾರೆ. ವಾಚಕರಾಗಬಹುದಾದ ತಾವೂ ಇತರರೂ ಅದರ ಅಂತರಂಗದಲ್ಲಿ ಹೊಕ್ಕು ಅವರನ್ನು ಚಿಂತಾರಹಿತರನ್ನಾಗಿ ಮಾಡುವಿರೆಂದು ನಂಬಿ ಈ ಕಾವ್ಯ ಇಂದು ತೆರೆದ ಹೊತ್ತಿಗೆಯಾಯಿತೆಂದು ಪ್ರಕಟಿಸುತ್ತೇನೆ.

# ವಿನಾಯಕರ ಕಾವ್ಯದಲ್ಲಿ ವ್ಯಕ್ತಿತ್ವ

ಹೊಸಗನ್ನಡ ಕಾವ್ಯದ ನವೋದಯದ ಕಾಲದಲ್ಲಿ ಉತ್ತರಕರ್ನಾಟಕದ ಪ್ರತಿನಿಧಿಗಳಾಗಿ ನವೀನ ಕಾವ್ಯವನ್ನು ರೂಪಿಸಿದ ಶ್ರೇಯಸ್ಸು ಬೇಂದ್ರೆ ಹಾಗೂ ಗೋಕಾಕರಿಗೆ ಸಲ್ಲಬೇಕೆಂಬ ಮಾತು ವಿಮರ್ಶೆಯ ದೃಷ್ಟಿಯಿಂದಲೂ ಇತಿಹಾಸದ ದೃಷ್ಟಿಯಿಂದಲೂ ನಿರ್ವಿವಾದ ಸತ್ಯವಾಗಿದೆ. ಆ ಕಾಲದಲ್ಲಿ ಬೇಂದ್ರೆಯವರು ಕಟ್ಟಿದ ಗೆಳೆಯರ ಗುಂಪು ನೀಹಾರಿಕೆ (Nebula) ಯಂತೆ ಕನಸಿನ ಒಂದು ತೇಜಃಪುಂಜ ವಾಗಿತ್ತು. 'ಗುಂಪು' ಒಡೆದುದರ ಫಲವಾಗಿಯೇ ಏನೋ, ಅದರ ಒಡಲಿನಲ್ಲಿ ಅನೇಕ ತಾರೆಗಳ ಜನ್ಮವಾಯಿತು. ಉದುರಲೇಬೇಕಾದ ಉಲ್ಕೆಗಳು ಉದುರಿ ಹೋದರೂ ಶಾಶ್ವತವಾಗಿ ಬೆಳಗುವ ಗ್ರಹಮಂಡಲಗಳಿಗೇನೂ ಕೊರತೆಯಿಲ್ಲ. ವಿನಾಯಕರು ಆ ಗ್ರಹಮಂಡಲದಲ್ಲಿ ಆಕಾಶದ ವಿಸ್ತಾರವನ್ನೆಲ್ಲ ಬೆಳಗುವ ಒಂದು ಗೋಲವಾಗಿದ್ದಾರೆ.

ಅಲಂಕಾರದ ಮಾತನ್ನು ಬಿಟ್ಟುಬಿಟ್ಟರೂ, ಈ ಮೂವತ್ತು ಮೂವತ್ತೈದು ವರ್ಷಗಳಲ್ಲಿ ವಿನಾಯಕರು ದಾನಮಾಡಿದ ಕಾವ್ಯಸಂಪತ್ತನ್ನು ನೋಡಿದರೆ ಸಾಕು, ಆ ಘನತೆಯ ಅರಿವಾದೀತು. 'ಪಯಣ' ದಿಂದ ಹಿಡಿದು 'ದ್ಯಾವಾಪೃಥಿವೀ'ಯ ವರೆಗೆ ಅವರವು ಒಬತ್ತು ಕವನಸಂಗ್ರಹಗಳು ಪ್ರಕಟವಾಗಿವೆ. ಇನ್ನೂ ಎಷ್ಟೋ ಹಸ್ತಪ್ರತಿಯಲ್ಲೇ ಇವೆ. ವಿಷಯವೈವಿಧ್ಯದಲ್ಲಿ, ಛಂದಸ್ಸಿನ ಪ್ರಯೋಗಪ್ರಿಯತೆ ಯಲ್ಲಿ, ಶೈಲಿಯ ನವೀನತೆಯಲ್ಲಿ ವಿನಾಯಕರ ಕಾವ್ಯ ಸಹಜವಾಗಿಯೇ ನಾಡಿನ ಸಿದ್ಧಿಗಳಲ್ಲೊಂದಾಗಿದೆ. ಆದರೆ ಸಿದ್ಧಿಯನ್ನು ನೋಡಿ ಕೇವಲ ಆಶ್ಚರ್ಯಪಡುವ ದರಲ್ಲಿಯೇ ನಮ್ಮ ವಿಮರ್ಶೆ ತೃಪ್ತವಾಗಬಾರದು. ಹೊಸಗನ್ನಡ ಕಾವ್ಯ ಒಂದು ಮನ್ವಂತರವನ್ನುಮುಗಿಸಿ ಇನ್ನೊಂದಕ್ಕಾಗಿ ಕಾದಿದೆ, ಒಂದು ದೃಷ್ಟಿಯಲ್ಲಿ ಪ್ರಾರಂಭಿ ಸಿಯೂ ಇದೆ. ಈ ಸಂಧಿಕಾಲದಲ್ಲಿಯೇ ವಿಮರ್ಶೆಯ ಅವತಾರವಾಗಬೇಕಾಗಿದೆ. ಸಾಹಿತ್ಯದ ಯಾತ್ರೆಯಲ್ಲಿ ವಿಮರ್ಶೆ ಒಂದು ಅಗತ್ಯವಾದ ನಿಲ್ದಾಣವಾಗಿ ಪರಿಣಮಿ ಸಿದೆ. ಎಷ್ಟು ದೂರ ನಡೆದುಬಂದಿದ್ದೇವೆನ್ನುವದನ್ನು ಅರಿಯುವದಕ್ಕಾಗಿ ಸ್ವಲ್ಪ ಹಿಂದೆ ನೋಡುವದು ಅಪ್ರಸ್ತುತವಾಗಲಾರದು.

ವಿನಾಯಕರ ಕಲಾತ್ಮಕ ವ್ಯಕ್ತಿತ್ವ ಯಾವ ಜಾತಿಯದೆಂಬುದನ್ನು ಅರಿ
ಬೇಕು. ವಿನಾಯಕರದು ಯಾತ್ರಿಕಜೀವ. ಬೇಂದ್ರೆಯವರೊಂದಿಗೆ ಹೋಲಿ
ನೋಡಿದಾಗ ಈ ಮಾತು ಇನ್ನೂ ಸ್ಪಷ್ಟವಾದೀತು. ನೆಲದ ಕಸುವನ್ನೆಲ್ಲ ಹೀ
ಕೊಂಡು ನಿಂತಲ್ಲಿಯೇ ನಿಂತರೂ ನಕ್ಷತ್ರಗಳೊಡನೆ ರಹಸ್ಯವಾಡುವ ಅಶ್ವ
ವೃಕ್ಷದಂತೆ ಅಂಬಿಕಾತನಯದತ್ತರ ವ್ಯಕ್ತಿತ್ವದ ನಿಲುವು. ಅಂತಲೇ ಸಂಪ್ರದಾ
ವನ್ನು ನಿರ್ಮಿಸುವ ದೃಢತೆ ಆ ವ್ಯಕ್ತಿತ್ವಕ್ಕೆ ಸಹಜವಾಗಿಯೇ ಬಂದಿದೆ. ಬೆಟ್ಟವ
ಈ ಮಹಮ್ಮದನೆಡೆಗೆ ನಡೆದು ಬರಬೇಕು. ಧ್ರುವತಾರೆಯಂತೆ ನೆಲೆ ನಿಂತ
ಜೀವದ ಸುತ್ತ ಸತ್ಯ ಸಪ್ತರ್ಷಿಯ ಮಂಡಲದಂತೆ ಪ್ರದಕ್ಷಿಣೆ ಹಾಕುತ್ತದೆ. ಕಾವ್
ಸಾಧನೆಯಲ್ಲಿ ಅಂಬಿಕಾತನಯದತ್ತರದು ತಪಸ್ಸಾದರೆ, ವಿನಾಯಕರದು ಒಂ
ಯಾತ್ರೆ. ಎರಡಕ್ಕೂ ಅದರದರ ಫಲ ಇದ್ದೇ ಇದೆ. ಗುರಿ ಒಂದೇ ಆದರ
ಮಾರ್ಗ ಬೇರೆ, ರುಚಿ ಬೇರೆ, ಸಾಮುಗ್ರಿ ಬೇರೆ.

ಈ ದೃಷ್ಟಿಯಿಂದ ವಿಚಾರಮಾಡಿದಾಗ ವಿನಾಯಕರ ಕಾವ್ಯದ ಅಭ್ಯಾ
ಹೆಚ್ಚು ಸುಗಮವಾದೀತು. ವಿನಾಯಕರ ಯಾತ್ರಿಕಜೀವದ ಕನಸು, ಅನುಭವ
ಅಭಿರುಚಿ, ಸಿದ್ಧಿಸಾಧನೆಗಳೆಲ್ಲ ಅವರ ಕಾವ್ಯದಲ್ಲಿ ಪ್ರತಿಫಲಿಸಿವೆಯೆಂದು ನನಗಂತ
ಕಂಡಿದೆ. ಯಾತ್ರಿಕನಲ್ಲಿರಬೇಕಾದ ಗುಣಗಳನ್ನೆಲ್ಲ ವಿನಾಯಕರ ವ್ಯಕ್ತಿತ್ವದ
ಗುರುತಿಸಬಹುದು. ಎಲ್ಲ ಯಾತ್ರಿಕರಂತೆಯೆ ವಿನಾಯಕರು ಕನಸುಗಾರರು, ಆದ
ವಾದಿಗಳು. ಪ್ರಯಾಣದ ಕನಸನ್ನು ಅವರು ಎಂದೋ ಕಂಡಿದ್ದಾರೆ. ಅವರ ದೃಷ್ಟಿ
ಯಾವಾಗಲೂ ದೃಶ್ಯದಾಚೆಯ ಅದೃಶ್ಯವನ್ನು ನೋಡುವ ಕುತೂಹಲವಿದೆ; ಜೀವ
ವನ್ನು ರೂಪಿಸುವ ದೈವಶಕ್ತಿಯಲ್ಲಿ ಅಮಿತ ವಿಶ್ವಾಸವಿದೆ. ಪ್ರಯಾಣವೆಂದರೆ ಕೇವ
ಒಂದು ಅದ್ಭುತರಮ್ಯ ಅನುಭವವಲ್ಲ ಎಂಬ ಅರಿವೂ ಇದೆ. ಸುಖ-ದುಃಖಗಳೆರಡ
ನೆರಳು-ಬೆಳಕುಗಳಂತೆ ಸಹಜಸಂಗಾತಿಗಳಾಗಿವೆ. ಪಯಣದ ಕನಸು ಒಂದೆಡೆ
ಎಳೆಯುತ್ತಿದ್ದರೆ ಇನ್ನೊಂದೆಡೆಗೆ ಮನೆಯ ನೆನಪು ಎಳೆಯುತ್ತದೆ; ಜೀವವನ
ಗಾಸಿಗೊಳಿಸುತ್ತದೆ. "ಕಂಗೊಳಿಸುವ ಕೆಂಪು ಮುಂದೆ" ನಿಜ, ಆದರೆ "ಕಂಗೆ
ಸುವ ಮಂಜು" ಹಿಂದೆ ಬೆನ್ನುಹತ್ತಿದೆ. ಪಯಣದ ಉತ್ಸಾಹ ಒಮ್ಮೊಮ್ಮೆ ಭಂ
ವಾದಂತಾಗಿ, ಸೋಲಿನ ಅನುಭವ ದಾರುಣವಾಗಿ ಒಮ್ಮೆಲೆ ಪರದೇಶಿತನದ ಅನ
ಭವವಾಗುತ್ತದೆ. ಆದರೆ ಮ್ಯಾಕ್‌ಬೆಥ್ ಹೇಳುವಂತೆ, ಮುಂದೆ ನಡೆಯುವದಕ್ಕಿಂ
ಹಿಂದಿರುಗುವದು ಹೆಚ್ಚು ಬೇಸರವಾಗಿರುತ್ತದೆ. ಅಂತೆಯೇ ಮುಂದೆ ಸಾಗ

ವಿಧಿಯಿಲ್ಲ.

ಹೌದು, ಮುಂದೆ ಸಾಗಲೇಬೇಕು. "ಚರಾತಿ ಚರತೋ ಭಗಃ" ಎಂದು ಉಪನಿಷತ್ತು ಹೇಳಲಿಲ್ಲವೇ? ನಾಡಾಡಿತನ ಜೀವಕ್ಕೇ ಅಂಟಿ ಬಂದಿದ್ದರೆ ಬಿಡುಗಡೆ ಎಲ್ಲಿ? ದೈವದ ಬಾಗಿಲು ಎಲ್ಲಿ ತೆರೆದೀತೆಂಬುದನ್ನು ನಿಶ್ಚಿತವಾಗಿ ಹೇಳಲಾಗುವುದಿಲ್ಲ. ಕಿನ್ನರಮಿಥುನಗಳನ್ನು ಬೆನ್ನುಹತ್ತಿ ಹೋದಾಗಲೇ ಚಂದ್ರಾಪೀಡ ಕಾದಂಬರಿಯನ್ನು ಕಾಣಬೇಕು. ನಮ್ಮ ಜೀವಿತದ ಅರ್ಥ ನಮ್ಮಿಂದ ದೂರವಾಗಿಯೆ ಇದೆ; ಪ್ರಯತ್ನಪಟ್ಟು ಅದನ್ನು ಕಾಣಬೇಕು. ಅದಕ್ಕಾಗಿ ಸಾವಿರ ತಡೆಗಳನ್ನೆದುರಿಸಬೇಕಾದೀತು, ಕಣ್ಣೀರಿನ ದಂಡವನ್ನು ತೆರಬೇಕಾದೀತು; ಜೀವನವನ್ನೂ ಬಲಿಗೊಡಬೇಕಾದೀತು. ಪುಣ್ಯವಂತರು ಮಾತ್ರ ಇದರಲ್ಲಿ ಬದುಕಿ ಬರಬಹುದು. ಆದರೆ ಕುಳಿತಲ್ಲಿಯೇ ಕುಳಿತವರ ಪುಣ್ಯ ಹಣ್ಣಾಗಲಾರದು.

ವಿನಾಯಕರ ಧ್ಯೇಯದೀಕ್ಷಿತವಾದ ಕವಿಜೀವ ಈ ಸತ್ಯವನ್ನು ಮೊದಲೇ ಅರಿತಿತ್ತು. ಅವರ ಮೊದಲ ಸಂಗ್ರಹಗಳಾದ 'ಕಲೋಪಾಸಕ' ಹಾಗೂ 'ಪಯಣ' ಈ ಕವನಸಂಗ್ರಹಗಳಲ್ಲಿ ಈ ಅರಿವನ್ನು ನಾವು ಗುರುತಿಸಬಹುದು. ಕವಿಯ ಜೀವ ಇಲ್ಲಿ ಕನಸನ್ನು ಕಾಣುತ್ತಿದೆ. ಆದರೆ ಕನಸು ಇನ್ನೂ ಸ್ಪಷ್ಟವಾಗಿ ಸುಳಿದಿಲ್ಲ. ಸುತ್ತುಮುತ್ತು ಹಬ್ಬಿದ ವಿಸ್ತಾರವಾದ ಜಗತ್ತು ನಾವು ಮನೆ ಮಾಡಿ ನಿಂತುಕೊಳ್ಳಲು ಸ್ಥಳವಲ್ಲ. ನಮ್ಮ ಅಂತಃಸತ್ವದ 'ರತ್ನಪಕ್ಷಿ' ಇಲ್ಲೇ ಎಲ್ಲಿಯೋ ಅಡಗಿಕೊಂಡಿದೆ. ಅದನ್ನು ಇಲ್ಲಿ ಹುಡುಕಬೇಕಾಗಿದೆ. ಪ್ರೀತಿ, ಸೌಂದರ್ಯ, ಕರುಣೆ ಮೊದಲಾದವುಗಳ ಸತ್ಯವೆಲ್ಲ ಇಲ್ಲಿಯ ಯಾವುದೋ ಮಾಯೆಯಲ್ಲಿ ಅಡಗಿಹೋಗಿದೆ. ಜನ್ಮಾಂತರಗಳ ದೀರ್ಘ ಪ್ರಯಾಣ ಕೈಕೊಂಡು ಅವುಗಳ ತಿರುಳನ್ನು ತಿಳಿಯಲು ನಾವಿಲ್ಲಿ ಬಂದಿದ್ದೇವೆ. ಜೀವನದಲ್ಲಿಯೇ ಜೀವನದ ಅರ್ಥ ಮುಳುಗಿಹೋಗಿದೆ. ಪ್ರಕೃತಿಯೇ ವಿಷಮವಾಗಿದೆಯೋ, ಅಥವಾ ನಮ್ಮ ದೃಷ್ಟಿಯಲ್ಲಿಯೇ ಏನಾದರೂ ದೋಷವಿದೆಯೋ ಬಲ್ಲವರಾರು? ಹಾಗಾದರೆ ಆ ಸತ್ಯವನ್ನೇ ಅಳೆಯೋಣವೆಂಬ ಸಂಕಲ್ಪ ಹುರಿಗೊಂಡಾಗ ಜೀವ ಧ್ಯೇಯಯಾತ್ರೆಗೆ ಅಣಿಗೊಳ್ಳುತ್ತದೆ. 'ಹುಟ್ಟಿದೂರು' ಚಲುವಾಗಿದೆ ನಿಜ. ಅಲ್ಲಿಯ ಪ್ರಕೃತಿಯ ಚಲುವು ಕಣ್ಣನ್ನು ಧನ್ಯವಾಗಿಸುವಂತಿದೆ. ಅಲ್ಲಿಯ ಬನಗಳಲ್ಲಿ,

**"ಇಲ್ಲಿ ಸುಗ್ಗಿ ಸುಗ್ಗಿ ಬಂದು**
**ತುಂಬಿ ತುಳುಕಿ ನಾಚಿ ನಿಂದು**

ಮುಚ್ಚಿ ನಿಲ್ವುದರಿಯದಾಗೆ
ನಾಣದೆಲ್ಲ ತೊಲಗಿ ಹೋಗೆ
ಎಲೆವನೆಗಳನಲ್ಲಿ ಕಟ್ಟಿ
ವಿಹಂಗಮಗಳೆದೆಯ ತಟ್ಟಿ
ಸಖಿಯರೆಲ್ಲ ಲತೆಯ ವ್ಯೂಹ-
ವಾಗೆ ತಾನು ಲತೆಯ ರೂಹ
ತಳೆದು ಬಂದು ನಿಂತಿತಿಲ್ಲಿ
ವೀಳ್ಯಗಾರ್ತಿಯಾಯಿತಿಲ್ಲಿ !”

ಆದರೆ ಇಂಥ ಚಲುವು ನಮ್ಮ ಜೀವಿತಕ್ಕೆ ಸಾಕೆ? ನಮ್ಮ ಜೀವನದ ರೀ
ನೀತಿಗಳೆಲ್ಲ ಬದಲಾಗಿ ಹೋಗಿರುವಾಗ ನಮ್ಮ ಇರುವಿಕೆಗೆ ಹೊಸ ಆವರಣ ಬೇ
ಬೇಕು. ನಿಸರ್ಗದ ಸೌಂದರ್ಯ ಸಮೃದ್ಧವಾಗಿದ್ದರೂ, ಜೀವಕ್ಕೆ ಮಾತ್ರ ಬಂಧ
ಉಸಿರುಕಟ್ಟಿಸುತ್ತಿದೆ. ಕವಿಯ ಬಾಳ್ಕ್ಷಿತಿಜ ವಿಸ್ತಾರವಾಗಿದೆ. ದೂರದ ನಾ
ಕೈಮಾಡಿ ಕರೆಯುತ್ತದೆ. ಅದಕ್ಕಾಗಿ ಹುಟ್ಟಿದೂರನ್ನು ತ್ಯಜಿಸಲೇಬೇಕಾಗಿ
ಆದರೂ ಅಗಲಿಕೆಯಿಲ್ಲದ ಪ್ರಯಾಣವೆಲ್ಲಿ? ಋಣದ ಬಂಧ ನೋವಿಲ್ಲದೆ ಹರಿಯ
ವಂತಿಲ್ಲ. ಕವಿ ತನ್ನ ಹೊಟ್ಟಿದೂರಿಗೆ ಕಾವ್ಯದ ಕಾಣಿಕೆಯೊಂದನಿತ್ತು ಮುಂ
ಸಾಗುತ್ತಾನೆ.

ಆದರೆ ಮುಂದೇನು? ಭವಿತವ್ಯ ನೋಡಲಂತೆ ರೋಮಾಂಚಕಾರಿಯಾಗಿ
ಆದರೆ ಕೈಯಲ್ಲಿ ಹಿಡಿಯಲು ಬರುವಂತಿಲ್ಲ. ದೊರಕಬೇಕಾದ ಫಲ ದೊರಕಿದಾಗಲ
ಪಟ್ಟ ಶ್ರಮ ಸಾರ್ಥಕವಾದೀತು; ಇಲ್ಲದಿದ್ದರೆ? ಕವಿಯ ಮನಸ್ಸು ಇಲ್ಲಿ ಹೊಯ
ಡಿದೆ. ಆದರೂ ಅಂತರ್ವಾಣಿ ಮತ್ತೆ ಮತ್ತೆ ಶ್ರದ್ಧೆಯನ್ನೇ ಪ್ರೇರೇಪಿಸುತ್ತದೆ. 'ಆ
ಗೋಲಿಲ್ಲದ ಹೆಳವನಂತೆ' ಬದುಕು ನಿರಾಧಾರವಾದಾಗಲೂ ಕಾಯುವ ಕೈಯೊಂ
ನಮಗೆ ಗೊತ್ತಿಲ್ಲದೇ ಇರಬಹುದು. ನೆಲದ ನೆಲೆಯಿಲ್ಲದ ಬಾಳು ದೈವಕ್ಕೆ ಶರಣಾದ
ಆಶ್ಚರ್ಯವೇನಿಲ್ಲ. ಸುಖದುಃಖಗಳೆಲ್ಲ 'ವಿಧಿವಿಲಾಸಿನಿ'ಯ ಲೀಲೆಗಳು. 'ಹ
ಹಣ್ಣಿನಲ್ಲಿರುವ ಬೀಜಗಾಳಿನಂತೆ' ದೈವಶಕ್ತಿ ನಮ್ಮ ಜೀವಿತದ ಒಳ ಹೊರಗನ್ನು
ವ್ಯಾಪಿಸಿದೆ. ಮೊದಲು ಸಂಕಲ್ಪವಾಗಿ ಮಿಂಚಿ ಆಮೇಲೆ ಅದರ ಫಲವಾಗಿ ಬರು
ದೈವಲೀಲೆ ಅವ್ಯಕ್ತವಾಗಿದೆ.

'ಬೀಜಗಾಳೀ ನೀನು ಗಾಳಿಯಲಿ ತೇಲಿಬಹೆ
ನಿನಗಾಗಿ ಜಪ್ಪಿಸಿಹೆನು'

ಜೀವನದ ಉದಯಾಸ್ತಮಾನಗಳೆಲ್ಲ ವಿಧಿಯ ಆಟಗಳೇ! ವಿಧಿ ಒಮ್ಮೆ 'ಸ್ವಪ್ನ ಸುಂದರಿ'ಯಾಗಿ ಕಂಡರೆ ಇನ್ನೊಮ್ಮೆ 'ಮಾಕಾಳಿ'ಯಾಗಿ ಕಾಣುತ್ತಾಳೆ. ಕವಿ ಆ ಶಕ್ತಿಗೆ ತನ್ನನ್ನೊಪ್ಪಿಸಿಕೊಳ್ಳುತ್ತಾನೆ. 'ಮೇಲು ನಿಬ್ಬಣದಾಸೆಯನ್ನು' ಎಬ್ಬಿಸಿದ ಆ 'ಕೊಡಗೂಸಿಗೆ' ತನ್ನಂತರಂಗವನ್ನು ಬೆಳಗಲು ಬಿನ್ನವಿಸಿಕೊಳ್ಳುತ್ತಾನೆ. ವಿಧಿವಿಲಾಸಿನಿ ಇನ್ನೂ ವಧು. ಜೀವನದಲ್ಲಿಯ ಸುಖದುಃಖಗಳನ್ನಾಯ್ದು ತನ್ನ ನಲ್ಲನಿಗಾಗಿ ಮಾಲೆಯೊಂದನ್ನು ಕಟ್ಟುತ್ತಿದ್ದಾಳೆ. ಆ ಮಾಲೆಯಲ್ಲಿ ಒಂದು ಮಂದಾರವಾಗಬೇಕೆಂದು ಕವಿಯ ಆಸೆಯಾಗಿದೆ.

ಸಂಕಲ್ಪ ದೃಢವಾದಾಗದಲೇ ಪ್ರಯಾಣದ ಮುಹೂರ್ತ ಸನ್ನಿಹಿತವಾಗಿದೆ. ಇಲ್ಲಿ ಮತ್ತೊಂದು ಒಳತೋಟಿ ಕವಿಗಾಗಿ ಕಾದಿದೆ. ಕೈ ಹಿಡಿದ ನಲ್ಲೆಯ ಸಂಬಂಧ ಹುಟ್ಟಿದೂರಿನ ಸಂಬಂಧದಂತೆಯೇ ಬಿಡಿಸಲು ಬಾರದ್ದು. ಮೇಲಾಗಿ ಇಲ್ಲಿಯ ಅಂತರ್ಮಥನ ಕೇವಲ ಒಂದು ಭಾವನೆಯಲ್ಲ ಪ್ರತ್ಯಕ್ಷವಾದ ಸಂಗತಿ. 'ಇಲ್ಲೆ ಇರು ಅಲ್ಲಿ ಹೋಗಿ ಮಲ್ಲಿಗೆಯನು ತರುವೆನು' ಹೇಳಿ ಕೇಳಿ ಸಂತವಿಸುವ ಮಾತುಗಳಿವು. ಒಳಗೆ ದುಃಖ ಜೀವಂತವಾಗಿ ಉರಿಯುತ್ತಿದೆ. ಅದನ್ನು ಸಹಿಸಲೇಬೇಕಾಗಿದೆ. ಆದರೆ ಇಲ್ಲಿಯೇ ನಿಲ್ಲಲಾಗದೆಂದು ಹೃದಯದ ಒಳಪ್ರೇರಣೆ ಹೇಳುತ್ತಿದೆ. ಇಲ್ಲಿ ನೋವು ಯಾತನೆಗಳು ಫಲಿಸುವದಿಲ್ಲ; ಜಿವದ ಚೇತನೆ ಮಾತ್ರ ಕೊಳೆಯುತ್ತಿದೆ. ಮುಂದೆ ಹೋಗಲೇಬೇಕಾಗಿದೆ. ಅಲ್ಲಿ ಏನಿದೆಯೊ ಗೊತ್ತಿಲ್ಲವಾದರೂ ಕೂಡ ಯಾವುದೋ ಭರವಸೆ ಹೇಳುತ್ತಿದೆ, 'ದೈವರೇಷೆ ಇಂದೇ ರುಚಿರವಾಗಬಹುದು' ಯಾರಿಗೆ ಗೊತ್ತು?

:: ೨ ::

ಇಲ್ಲಿಗೆ ವಿನಾಯಕರ ಕಾವ್ಯದ ಮೊದಲ ಘಟ್ಟ ಮುಗಿದಂತಾಯಿತು. ಈ ಭಾಗದ ಕಾವ್ಯಕ್ಕೆ ಶೈಶವದ ಮುಗ್ಧತೆಯೂ ಇದೆ, ಕನಸುಗಾರಿಕೆಯೂ ಇದೆ. ಸೌಂದರ್ಯದ ಬಗ್ಗೆ ಪ್ರೀತಿ, ಸತ್ಯದ ಬಗ್ಗೆ ಹಸಿವು, ಗೆಳೆತನದ ಹಂಬಲ, ಅಗಲಿಕೆಯ ನೋವು, ಘನತೆಯ ವಿಷಯವಾಗಿರುವ ಸಹಜಗೌರವ, ಹಾಗೂ ಅಗಮ್ಯ

ವನ್ನು ಕಾಣುವ ಕುತೂಹಲ ಇವೆಲ್ಲ ಇಲ್ಲಿ ರೂಪುವಡೆದಿವೆ. ಸಂಕಲ್ಪವಿದೆ ಸಾರ್ಥ
ಕತೆಯಿಲ್ಲ; ತೋರಿಕೆಯಿದೆ ಆದರೆ ದರ್ಶನವಿಲ್ಲ. ಪ್ರಕೃತಿಯು ರಮ್ಯತೆಯೇನೋ
ಕವಿಯನ್ನು ಸೆಳೆದಿದೆ. ಆದರೆ ಅದು ಕ್ಷಣಮಾತ್ರದ ಮೈಮರೆತ. ಈ ಸಂಗ್ರಹಗಳ
ಲ್ಲಿಯ ಸೌಂದರ್ಯವೆಲ್ಲ ಮಿಂಚಿನಂತೆ ತೋರಿಯಡಗುವಂಥದು. ಕಲೆಯ 'ನೇತಿ
ದರ್ಶನ ಮಾತ್ರ ನಮಗಾಗುತ್ತದೆ.

ವಿನಾಯಕರ ಮೂರನೆಯ ಸಂಗ್ರಹವಾದ 'ಸಮುದ್ರಗೀತಗಳು' ಒಮ್ಮೆಲೆ
ಹೊಸತನದ ಅರಿವನ್ನು ಮೈಗೂಡಿಸಿಕೊಂಡಿದೆ. ಐತಿಹಾಸಿಕವಾಗಿ ನೋಡಿದರೆ
ಕನ್ನಡಕಾವ್ಯದಲ್ಲಿ ನವ್ಯತೆ ಆಕಸ್ಮಿಕವಾಗಿ ಮೂಡಿಬಂದಿದೆ. ಅಂತರ್ಮಥನವಾಗಲಿ,
ಹಳೆಯದರ ಬಗ್ಗೆ ಜುಗುಪ್ಸೆಯಾಗಲಿ ಅದಕ್ಕೆ ಕಾರಣವಾಗಿಲ್ಲ. ಪಡುವಣಕ್ಕೆ
ಹೊರಟು ನಿಂತ ವಿನಾಯಕರು ನವ್ಯತೆಯನ್ನು ಸಮುದ್ರದ ಅಲೆಗಳ ಮೇಲೆಯೇ
ಹಿಡಿದರು. ಹಳೆಯ ಜೀವನದ ಕನಸುಗಾರಿಕೆಯೆಲ್ಲ ಮಂಜಿನಂತೆ ಮಾಯವಾಗಿ,
ಹೊಸಜೀವನದ ಕ್ಷಿತಿಜದ ರೇಖೆ ಇನ್ನೂ ಗೋಚರಿಸದಿದ್ದಾಗ ಕವಿಯ ಜೀವ
ನವೂ ಸಮುದ್ರದಂತೆಯೇ ಭೋರ್ಗರೆಯುತ್ತದೆ. ಹೊರಗಿನ ಆವರಣ ಒಳಗಿನ
ಏರಿಳಿತಗಳ ಪ್ರತಿಕೃತಿಯಾದಾಗ, ಭಾವನೆಗಳೆಲ್ಲ ಬಂಧನವನ್ನು ಕಳಚಿಕೊಂಡು
ಉಕ್ಕಿಬರುತ್ತಿರುವಾಗ ಸೂತ್ರ ನಿಯಮಗಳಿಗೆ ಸ್ಥಾನವಾದರೂ ಎಲ್ಲಿ? 'ಶರಧಿಗೆ
ಕೊಡದಿರು ಷಟ್ಪದಿಯ ದೀಕ್ಷೆಯನು' ಎಂದು ಕವಿ ಘೋಷಿಸಿದ್ದಾನೆ.

ಈಗ ಪ್ರಯಾಣ ಕೇವಲ ಕನಸಲ್ಲ, ವಾಸ್ತವಸಂಗತಿಯಾಗಿದೆ. ದೃಷ್ಟಿ
ಯೊಡನೆ ಹೊರಗಿನ ಜಗತ್ತೂ ಬದಲಾಗಿದೆ. ಪ್ರಕೃತಿ 'ಹುಟ್ಟಿದೂರಿ'ನ ಬನಗಳಲ್ಲಿ
ಯಂತೆ ಇಲ್ಲಿ ಕುಸುಮಕೋಮಲೆಯಾಗಿಲ್ಲ, ದುರ್ದಮ್ಯಶಕ್ತಿಯಾಗಿದೆ. ಮೊದಲು
ಸತ್ಯವನ್ನು ಕಲ್ಪನೆಯಲ್ಲಿ ಮಾತ್ರ ಕಾಣಬೇಕಿತ್ತು. ಆದರೆ ಈಗ ಅದು ಐಂದ್ರಿ
ಯಕ ಅನುಭವವಾಗಿದೆ. ನರನರವೂ ಅದಕ್ಕೆ ಪ್ರತಿಸ್ಪಂದಿಸುತ್ತದೆ. ಇಲ್ಲಿಯ ಭಾವ
ಗಳಿಗೆಲ್ಲ ಉತ್ಕಟವಾದ ಪ್ರಾಮಾಣಿಕತೆಯಿದೆ. ಅಂತಲೇ ಆಡಿದ್ದೆಲ್ಲ ಕಾವ್ಯವಾಗು
ತ್ತದೆ. 'ಕಂಡೆ ನಿನ್ನನ್ನು ಸಮುದ್ರನಾಥ' ಎಂಬ ಸಾಮಾನ್ಯ ಚರಣವೂ ಭಾವೋ
ತ್ಕಟತೆಯಿಂದ ಸ್ಫುರಿಸುತ್ತಿದೆ.

ಕವಿಯ ನಾಡಾಡಿ-ಜೀವ ಇಲ್ಲಿ ಏಕಾಕಿಯಾಗಿದೆ. ಆದರೆ ಸುತ್ತು ಮೊರೆ
ಯುವ ಸಮುದ್ರವೂ ಏಕಾಕಿಯಾಗಿಲ್ಲವೇ? ಅದರ ಸಾವಿರ ಭಾವಲಹರಿಗಳೊಂದಿಗೆ
ಕವಿ ಮೈಮರೆಯುತ್ತಾನೆ. ಅಲ್ಲಿಯ ಸೂರ್ಯೋದಯ-ಸೂರ್ಯಾಸ್ತಗಳು ಇಂದ್ರ-

ಜಾಲದ ಅರಮನೆಗಳಾಗಿವೆ. ಭೂಮಧ್ಯಸಮುದ್ರದ ಮಧ್ಯದಲ್ಲಿ ಹಡಗು ಬಂದಾಗ ಮಧ್ಯರಾತ್ರಿಯಾಗಿದೆ. ಆ ಒಂದು ಕ್ಷಣ ಕವಿಗೆ ಅಮೃತಕ್ಷಣವಾಗಿ ತೋರಿದೆ. ಆಕಾಶಗಂಗೆ ಮುಡಿಯಲ್ಲಿ ಕೃತ್ತಿಕೆಯ ಮೊಗ್ಗೆಮಾಲೆಯನ್ನು ಧರಿಸಿಕೊಂಡು ತನ್ನ ಕಾದಲನಾದ ಸಮುದ್ರರಾಜನಿಗಾಗಿ ದಾರಿ ಕಾಯುತ್ತಿದ್ದಾಳೆ. ಕೆಳಗೆ ಸಮುದ್ರ ಶಾಂತಿಯಲ್ಲಿ ಪವಡಿಸಿದೆ. ಗಾವುದಗಳ ದೂರದಲ್ಲಿದ್ದರೂ ಇಬ್ಬರೂ ಒಂದೇ ಪ್ರಣಯ ವಿಚಾರದಲ್ಲಿ ಮುಳುಗಿರುವಂತಿದೆ.

**'ಓ ! ಸಮುದ್ರರಾಜ ! ಬರಿ ಹಸುಳೆ ನಾನು !**
**ನಿನ್ನ ಪ್ರಣಯಮುಹೂರ್ತವನು ಕಂಡೆನೆಂದು**
**ಕೋಪಿಸಬೇಡ ಕಂಡೆಯಾ !**
**ಪರಮ ಪಾವಿತ್ರ್ಯವನು ಪಡೆದಿದೆ ನನ್ನ ಕಣ್ಣಿನಲ್ಲಿ,—**
**ನಿಮ್ಮೀರ್ವರ ನಗ್ನಸೌಂದರ್ಯವಿದು !'**

ಈ ಕವನ ಒಂದು ಕಡೆಗೆ ಪ್ರಕೃತಿಯ ನಿತಾಂತ ಸೌಂದರ್ಯವನ್ನು ಚಿತ್ರಿಸುತ್ತಿದ್ದರೆ ಇನ್ನೊಂದು ಕಡೆಗೆ ಕವಿಯ ಅಂತರಂಗವನ್ನೂ ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆ. ಕವನದ ಲಯ ಸುತ್ತಲಿನ ಶಾಂತಿಯಿಂದಲೇ ಪಾಠ ಕಲಿತಂತೆ, ಮೌನದ ಕಿವಿಗೆ ಮಾತ್ರ ಕೇಳಿಸುವಷ್ಟು ಸ್ತಬ್ಧವಾಗಿದೆ.

ಪ್ರಕೃತಿಯ ನಿಗೂಢತೆಗಿಂತ ಮಾನವನ ಸಮಸ್ಯೆ ಹೆಚ್ಚು ತೊಡಕಿನದಾಗಿದೆ. ನೋಡಲಿರುವ ಹೊಸ ಜನಾಂಗದ ಬಗ್ಗೆ ಕುತೂಹಲವೂ ಇದೆ, ಭೀತಿಯೂ ಇದೆ. ಹಡಗದ ಮೇಲೆಯೇ ಭೀತಿಯ ನೆರಳುಗಳು ಸುಳಿದಿವೆ. ಏಡನ್, ಕ್ರೀಟ, ಸ್ಟ್ರಾಂಬೋಲಿ, ಕೋರ್ಸಿಕಾ, ಆಫ್ರಿಕಾ, ಇಂಗ್ಲಂಡ ಮೊದಲಾದ ಬೇರೆ ಬೇರೆ ದೇಶಗಳ ಇತಿಹಾಸಗಳ ಮೆರವಣಿಗೆ ಕಣ್ಣಮುಂದೆ ತೆರೆದಾಗ ಕವಿಯ ಜೀವ ತಲ್ಲಣಿಸುತ್ತಿದೆ. ಪಡುವಣವೋ ಮೂಡಣವೋ—ದಿಕ್ಕು ಬದಲಾದರೂ ಮನುಷ್ಯ ಅಂತರಂಗದಲ್ಲಿ ಇನ್ನೂ ಪಶುವಾಗಿಯೇ ಉಳಿದಿರುವನೆಂಬ ದಾರುಣ ಸತ್ಯ ಕಣ್ಣಿಗೆ ಕಟ್ಟಿದಾಗ ಕವಿಗೆ ತನ್ನ ಸಂಕಲ್ಪವೆಲ್ಲ ವ್ಯರ್ಥವಾಯಿತೇನೋ ಎಂದೆನಿಸುತ್ತದೆ. ಎಡಿನ್‌ಬರೋ ಕೋಟೆಯ ತುದಿಗೆ ನಿಂತು ನೋಡಿದಾಗ ಕಾಣುವದೇನು ?

**'ಮನುಕುಲದ ಕೆನ್ನೀರ ಮಡುವಿಗಿಹ ಸುಳಿಯಲ್ಲಿ**
**ನಟ್ಟನಡುವೆಯೆ ನಿಂತು ಒರೆಯುತಿಹೆನೀ ಮಾತ'**

ಈ ಕೋಟೆ ಅನಂತವಾಗಿ ಪ್ರವಹಿಸುವ ಕಾಲಪ್ರವಾಹದ ಕಲ್ಲುಬಂಡೆಯಾಗಿ ಮನುಷ್ಯನ ಪಾಶವಿಕ ಇತಿಹಾಸದ ಕತೆಯನ್ನೇ ಹೇಳುತ್ತಿದೆ. ಶಿಲಾಯುಗದ

ಕಲ್ಲಿನಾಯುಧಗಳು ಇನ್ನೂ ಅಲ್ಲಿ ಝಳಪಿಸುತ್ತವೆ. ಮಧ್ಯಯುಗದ ಧರ್ಮ
ಪ್ರೀತಿ, ಯುದ್ಧಗಳ ತ್ರಿಮುಖವನ್ನು ತೋರುತ್ತ ಸಂಸ್ಕೃತಿಯ ಧ್ವಜವನ್ನು ಮೆ
ಸುತ್ತಿದೆ. ಆದರೆ ಧರ್ಮದ ಹಿಂದೇಯೇ ಅಜ್ಞಾನ, ಪ್ರೀತಿಯ ಹಿಂದೆಯೇ ಕಾಮ
ಯುದ್ಧದ ಹಿಂದೆಯೇ ಪಶುಗಳೂ ನಾಚುವಂಥ ಹಿಂಸೆ ಇನ್ನೂ ಹೆಚ್ಚು ಕ್ರೂ
ವಾಗಿವೆ. ಮೇರಿರಾಣಿಯ ಶಯನಮಂದಿರ ಉಚ್ಛೃಂಖಲ ಕಾಮಕ್ಕೆ ಪ್ರತೀ
ವಾಗಿದೆ. ಅಲ್ಲಿಯ ಆಯುಧಶಾಲೆ ಶಕ್ತಿವಿಹೀನವಾಗಿದ್ದರೂ ಕ್ರೂರವಾಗಿದೆ
ಕಾಲಪುರುಷ ಯುಗಗಳೆಂಬ ಮೃಗಗಳನ್ನು ಬೇಟೆಯಾಡುತ್ತ ತನ್ನ ಕೈಸಾಲೆಯ
ದಂಷ್ಟ್ರದೊವಲುಗಳನ್ನು ತಂದಿಟ್ಟಂತೆ ಭಯಾನಕವಾಗಿದೆ.

ಜಗತ್ತನ್ನೇ ಬದಲಿಸುವ ಪಣ ತೊಟ್ಟು ಬಂದ ಆಧುನಿಕ ಯುಗದ ಪಾಡು
ಅಷ್ಟೇ. ಯುದ್ಧಮಾಡುವದು ಮೊದಲು ಶೌರ್ಯದ ಪತಾಕೆಯಾಗಿದ್ದರೆ ಈ
ತಾಯ್ನಾಡಿನ ಸೇವೆಯೆಂದು ಕರ್ತವ್ಯವಾಗಿದೆ. ಮೊದಲನೆಯ ಮಹಾಯುದ್ಧ
ಭೀಕರತೆಯನ್ನೆಲ್ಲ ಶಿಲ್ಪಿಯೋರ್ವನು ಮೂರ್ತಿಶಿಲ್ಪದಲ್ಲಿ ಮೂಡಿಸಿದ್ದಾನೆ. ರೀ
ಬದಲಾಗಿದ್ದರೂ ಅದೇ ಪಶುವಿನ ಅಂತಃಸತ್ವ ಇನ್ನೂ ತಾಂಡವಿಸುತ್ತಿದೆ ಎಂಬುದ
ಅಮರಶಾಸನದಂತೆ ಆ ಶಿಲ್ಪ ಕಾಣುತ್ತಿದೆ. ಮನುಕುಲದ ಇತಿಹಾಸ ಪುನರುಕ್ತ
ವಾಗಿದೆ.

ಇಂದಿಗೋ ! ಕೊಲೆಯೆಂಬ ಭಿಲ್ಲಿಣಿಗೆ ತಾಯ್ನಾಡ
ಪ್ರೀತಿಯೆಂಬೊಂದು ಕುಂಕುಮದ ಬೊಟ್ಟಿಟ್ಟು ಕಾ-
ಡಿಗೆಯಿಟ್ಟು, ಪಟ್ಟಗಟ್ಟಿಹರಿಲ್ಲಿ ಮತ್ತವಳ
ಸೇವೆಯಲಿ ತೀರಿರುವರಮರರಿಹದಿಹರೆಂದುಸುರಿ

ಕೊಲೆಯನ್ನು ಭಿಲ್ಲಿಣಿಗೆ ಹೋಲಿಸಿದ ಈ ಉಪಮೆಯಲ್ಲಿ ಎಂಥ ವಂಜ್ಯಕ
ಯಿದೆ! ಭೂಮಂಡಲವನ್ನೆಲ್ಲ ನಾಗರಿಕತೆಯ ಬಿಳಿ-ಛಾಯೆ ಆವರಿಸಿಕೊಂಡರೂ
ಕೂಡ ಈ ಭಿಲ್ಲಣಿಗೆ ಅಮರಪದವಿ ಸಂದಿದೆಯೆಂಬ ವ್ಯಂಗ್ಯ ಎಷ್ಟು ಕೂರಾಗಿದೆ !

ಪಶ್ಚಿಮದ ನಾಗರಿಕತೆಯ ತೆರೆಯ ಹಿಂದಿನ ರುದ್ರ ದೃಶ್ಯವನ್ನು ಕಂಡು ಕ
ರೋಸಿ ಹೋಗಿದ್ದಾನೆ. ಇದು ಎಷ್ಟರ ಮಟ್ಟಿಗೆ ಗ್ರಾಹ್ಯವೆಂಬ ಮಾತು ವಾದಗ್ರಸ್ತ
ವಾದ ವಿಷಯ. ಆದರೆ ವಿನಾಯಕರ ಪ್ರಾಮಾಣಿಕತೆ ಹಾಗೂ ಭಾವ
ಉತ್ಕಟತೆಗಳನ್ನು ಅಲ್ಲಗಳೆಯುವಂತಿಲ್ಲ. ಅಗಲಿಕೆಯ ವ್ಯಥೆ, ತಾಯ್ನಾಡಿನ
ನೂರಾರು ನೆನಪುಗಳು. ವಿದೇಶದಲ್ಲಿಯ ವರ್ಣದ್ವೇಷ ಕವಿಯ ಮನವನ್ನು ನೂರ
ರೀತಿಯಲ್ಲಿ ಪೀಡಿಸಿದಾಗ ಇಂಥ ಉದ್ಗಾರಗಳು ಹೊರಬಂದರೆ ಆಶ್ಚರ್ಯವೇನಿಲ್ಲ.

'ಸಮುದ್ರಗೀತ'ಗಳಲ್ಲಿ ವಿನಾಯಕರ ಕಾವ್ಯದ ಪ್ರಗತಿಯ ಇನ್ನೊಂದು ಹೆಜ್ಜೆಯನ್ನು ಗುರುತಿಸಬಹುದು. ಇಲ್ಲಿ ಅನುಭವದ ಸೀಮೆಯೊಡನೆ ಕಾಣುವ ದೃಷ್ಟಿಯೂ ವಿಶಾಲವಾಗುತ್ತ ನಡೆದಿದೆ. ಈ ವಿಸ್ತಾರ-ವಿಶಾಲತೆಗಳು ವಿನಾಯಕರ ಕಾವ್ಯದ ವಿಶಿಷ್ಟ ಅಂಕಿತಗಳಲ್ಲೊಂದಾಗಿದೆ. ಮೇರೆಯರಿಯದ ಸಮುದ್ರ, ಮೇರೆ-ಯರಿಯದ ಆಕಾಶ, ಎತ್ತರವಾದ ಬೆಟ್ಟಗಳು, ಇವೆಲ್ಲ ಸಹಜವಾಗಿಯೇ ಅವರ ಕಾವ್ಯಕ್ಕೆ ವಿಷಯಗಳಾಗುತ್ತವೆ. ವಿನಾಯಕರ ಜಿಜ್ಞಾಸೆಗೆ ಸಾವೆಂಬುದೇ ಇಲ್ಲ. ಅವರ ಪ್ರತಿಭೆಯ ಉಗಮವೇ ಜಿಜ್ಞಾಸೆಯಲ್ಲಿದೆ. ಈ ಸಂಗ್ರಹದ ಇನ್ನೊಂದು ವೈಶಿಷ್ಟ್ಯವೆಂದರೆ ಈ ಕಾವ್ಯದ ಉಸಿರಾಗಿರುವ ಮಾನವತೆ. ಮೊದಲಿನ ಕಾವ್ಯದಲ್ಲಿ ಅದು ಕೇವಲ ಆದರ್ಶದ ಕನಸಾಗಿ ವೈಭವಪೂರ್ಣವಾಗಿತ್ತು. ಇಲ್ಲಿ ಅದು ಜೀವ-ಸ್ಪಂದನವಾಗಿದೆ.

:: ೩ ::

ಪ್ರತಿಯೊಬ್ಬ ಪ್ರಯಾಣಿಕನಿಗೂ ಅವನವನ ವಿಶ್ರಾಂತಿಯ ಕಾಲವೊಂದು ಇದ್ದೇ ಇದೆ. 'ಅಭ್ಯುದಯ' ಹಾಗೂ 'ಬಾಳದೇಗುಲದಲ್ಲಿ' ಈ ಎರಡು ಸಂಗ್ರಹಗಳಲ್ಲಿ ವಿನಾಯಕರ ಜೀವ ನೆಲೆನಿಂತು ಸಮಾಧಾನವನ್ನುಂಡಿದ್ದನ್ನು ಕಾಣಬಹುದು. ಉಳಿದ ಕಡೆಗಿನಂತೆ ಪ್ರಯಾಣದ ಅಭಿಲಾಷೆ ಈ ಸಂಗ್ರಹಗಳಿಗೆ ಪ್ರೇರಕವಾಗಿಲ್ಲ. ಈ ಎರಡೂ ಸಂಗ್ರಹಗಳಲ್ಲಿಯ ಕವನಗಳು ವಿನಾಯಕರು ತಮ್ಮ ಜೀವನದ ಬೇರೆ ಬೇರೆ ಕಾಲದಲ್ಲಿ ಬರೆದವುಗಳಾಗಿವೆ. 'ಅಭ್ಯುದಯ' ಕನ್ನಡದಲ್ಲಿಯೇ ಶ್ರೇಷ್ಠ ತರಗತಿಯ ಸುನೀತಗಳ ಸಂಗ್ರಹವಾಗಿದೆ. ಇಂಗ್ಲೀಷಿನ 'Sonnet' ರೂಪ ಯಥೋಚಿತವಾದ ಛಂದಸ್ಸು ಲಯಗಳೊಂದಿಗೆ ಈಗಾಗಲೇ ಕನ್ನಡದಲ್ಲಿ ಬಂದಿತ್ತು. ಈಗಿನ ಅದರ ಸ್ವರೂಪವು ಅನುಕರಣವಲ್ಲವೆನ್ನು-ವಷ್ಟರ ಮಟ್ಟಿಗೆ ಸ್ವತಂತ್ರವಾಗಿದೆ. ವಿನಾಯಕರು ಈ ರೂಪಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡಿದ ಕವಿಗಳಲ್ಲೊಬ್ಬರು.

'ಅಭ್ಯುದಯ'ದಲ್ಲಿಯ ಕವನಗಳಲ್ಲೆಲ್ಲ ಅನುಭವಕ್ಕಿಂತ ವಿಚಾರಕ್ಕೆ, ಭಾವ

ಕ್ಕಿಂತ ಅಭಿವ್ಯಕ್ತಿಗೆ ಪ್ರಾಶಸ್ತ್ಯ ಹೆಚ್ಚು. ಒಂದು ದೃಷ್ಟಿಯಿಂದ ಇವೆಲ್ಲ 'ವಿರಾಮ ಕಾಲದಲ್ಲಿ ಸಂಗ್ರಹಿಸಿಟ್ಟ ನೆನಪು'ಗಳಾಗಿವೆ. ಇಲ್ಲಿ ಭಾವೋದ್ದೀಪನವಿಲ್ಲ, ಆದರೆ ಭಾವನೆಗಳ ಸಮತೂಕ ಮಾತ್ರ ಕಾಣುತ್ತಿದೆ. ಸಂತೋಷ ಒಂದು ನಗೆಯ ಸುಳಿಯಾಗಿ, ದುಃಖ ಒಂದು ನಿಟ್ಟುಸಿರಾಗಿ, ಕಾವ್ಯ ಸುನೀತವಾಗಿದೆ. ಅಂತಲೇ ಈ ರೀತಿಯ ಕಾವ್ಯ ಓದುಗನ ಮೇಲೆ ಯಾವ ಪ್ರಭಾವವನ್ನೂ ಬೀರದೆ ಹೋಗ ಬಹುದು. ಆದರೆ ಒಂದು ದೃಷ್ಟಿಯಿಂದ ಈ ಸಂಗ್ರಹ ಅತ್ಯಂತ ಮಹತ್ವಪೂರ್ಣ ವಾಗಿದೆ. ಕವಿಯ ವ್ಯಕ್ತಿತ್ವದ ಅನೇಕ ಪರಿಗಳನ್ನು ಇಲ್ಲಿ ಕಾಣಬಹುದು. ವಾಸ್ತ ವತೆಯನ್ನು ನೈಗೂಡಿಸಿಕೊಂಡ ಆದರ್ಶವಾದ, ಜೀವನದಲ್ಲಿಯ ಅಚಲವಾದ ಶ್ರದ್ಧೆ ಇವು ಮಾಗಿದ ಜೀವನದ ಕುರುಹುಗಳಾಗಿ ಬಂದಿವೆ. ಮೊದಲಿನಂತೆಯೆ ಇಲ್ಲಿಯೂ ದೊಡ್ಡದರ ಬಗ್ಗೆ ಆದರವಿದೆ. ಆದರೆ ಅದರ ಜೊತೆಗೇ ಸತ್ಯದ ವಿಷಯವಾಗಿ ತೀವ್ರ ಹಂಬಲವೂ ಇದೆ. 'ಶಿಲ್ಪಿ' 'ಪೇಜಾವರರನ್ನು ಕುರಿತು' 'ಹಿಟ್ಲರ' ಮುಂತಾದ ಸುನೀತಗಳಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು. ಮೊದಲಿನ ಆಕ್ರೋಶ ಸಂತಾಪಗಳೂ ಜುಗುಪ್ಸೆಯೂ ಕಾಣಬರುವದಿಲ್ಲ. 'ನೀವ ಟ್ರೀ.ಕಾ. ಏನು?....' ಎಂದು ಮೊದಲಾಗುವ ಪದ್ಯದಲ್ಲಿ ಕೂಡ ತಿರಸ್ಕಾರವಿಲ್ಲ ಹೊಟ್ಟೆತುಂಬ ನಗೆಯಿದೆ. ಜೀವನದಲ್ಲಿ ಕಂಡುಬರುವ ತೀವ್ರವಾದ ವಿರೋಧವು ಕೂಡ ಜಗತ್ತಿನ ವೈವಿಧ್ಯದ ರೀತಿ ಎಂಬ ಸತ್ಯಸೂಚ್ಯವಾಗಿಯೇ ಸುಳಿದು ಹೋಗಿದೆ.

ಇದೇ ಸೂತ್ರವೇ 'ಬಾಳದೇಗುಲದಲ್ಲಿ' ಸಂಗ್ರಹದ ತಳಹದಿಯಾಗಿದೆ. ಇದೊಂದು ಕವನಸಂಗ್ರಹವಲ್ಲ, ಕವನಮಂದಿರವೆಂದು ವಿನಾಯಕರೇ ಕರೆದಿದ್ದಾರೆ. ವಾಸ್ತುಶಿಲ್ಪದ ಈ ಭವ್ಯರೂಪಕ ಇಡೀ ಕಾವ್ಯಕ್ಕೇ ಹಿನ್ನೆಲೆಯಾಗಿ ನಿಂತಿದೆ. ಅದಕ್ಕನುಗುಣವಾಗಿಯೇ ಕಾವ್ಯದ ರಚನೆಯಿದೆ. ವಿನಾಯಕರ ಮೊದಲಿನ ಅವಧಿಯ ಕಾವ್ಯರಚನೆ ಕನಸಿನಂತೆ ಮೋಹಕವಾಗಿದ್ದರೂ ಅಷ್ಟೇ ಚಂಚಲತೆ ಯಿಂದ ಕೂಡಿತ್ತು. ಸಮುದ್ರಗೀತಗಳಲ್ಲಿಯ ಭಾವಜಲಧಿಯ ಉಚ್ಛೃಂಖಲತೆಯ ಬಗೆಯೇ ಬೇರೆ. ಮೂರನೆಯ ಅವಧಿಯ ಈ ಕಾವ್ಯಖಂಡದಲ್ಲಿ ಭಾಷೆಯ ಬಿಗುವು, ರಚನೆಯಲ್ಲಿಯ ಸಂಯಮ, ಅರ್ಥವ್ಯಂಜಕತೆ, ಅಂತರಂಗದ ಪರಿಪಾಕಕ್ಕೆ ಪ್ರತೀಕವಾಗಿ ಬಂದಿವೆ.

'ಬಾಳದೇಗುಲದಲ್ಲಿ' ಹೊಸಗಾಲದ ಮಹಾಕಾವ್ಯದ ಮಾದರಿಯೆಂದು

ವಿನಾಯಕರ ಅಭಿಪ್ರಾಯ. ಅದು ಹೌದೋ ಅಲ್ಲವೋ ಎಂಬ ವಾದ ಇಲ್ಲಿ ಸಲ್ಲದು. ಪ್ರಾಚೀನ ಮಹಾಕಾವ್ಯಗಳಲ್ಲಿಯಂತೆ ಜನಾಂಗವೊಂದರ ತಲೆತಲಾಂತರಗಳ ಅವ್ಯಕ್ತಭಾವಸಮುದಾಯ ಇಲ್ಲಿ ಕಾವ್ಯವಾಗಿ ಬಂದಿಲ್ಲ. ಅಥವಾ ನಮ್ಮ ಹಿಂದಿನ ತತ್ವನಿಷ್ಠ ಕಾವ್ಯಗಳಂತೆ, ಯೋಗಿಯಾದ ಕವಿಯೊಬ್ಬ ಜಗತ್ತಿನ ಜೀವನವನ್ನೆಲ್ಲ ದೂರ ನಿಂತು ನಿರ್ಲಿಪ್ತತೆಯಿಂದ ಕಂಡು, ನಿರ್ಮಿಸಿದ ಕೃತಿಯೂ ಇದಲ್ಲ. ಯಾತ್ರಿಕನೊಬ್ಬ ಯಾತ್ರೆ ಮುಗಿದ ಮೇಲೆ, ತನ್ನ ಶ್ರದ್ಧೆ ವಿಶ್ವಾಸಗಳನ್ನು, ಅನುಭವವಿಚಾರಗಳನ್ನು ದೇಗುಲದ ಸ್ಮಾರಕವೊಂದರಲ್ಲಿ ಎರಕಹೊಯ್ದಂತಿದೆ ಈ ಕಾವ್ಯದ ನಿಲುವು.

ವಿನಾಯಕರ ಕವಿಜೀವ ಬಾಳಿನ ಅನೇಕ ವೈವಿಧ್ಯವನ್ನು ಕಂಡು ಬೆರಗುವಡೆದಿದೆ. ಬಾಳಿನ ಬೆಳವಣಿಗೆ, ಜೀವಜೀವಗಳಲ್ಲಿಯ ಕಲಹ, ಹೃದಯ ಅನುಭವಿಸಲೇಬೇಕಾದ ನೋವು, ವ್ಯಕ್ತಿಯೇ ಸಮಾಜವಾಗಿ ತನ್ನನ್ನು ಆದರಡಿಯಲ್ಲಿ ಬಲಿಯಾಗಿಸಿಕೊಳ್ಳುವ ರೀತಿ, ವ್ಯಕ್ತಿಯ ಸ್ವಯಂಪೂರ್ಣತೆ, ವ್ಯಕ್ತಿವ್ಯಕ್ತಿಗಳಲ್ಲಿಯ ಜನ್ಮಜಾತವಾದ ತಾರತಮ್ಯ, ಇಷ್ಟೆಲ್ಲ ಅಳೆದು ನೋಡಿದರೂ ಕಾಣದ ಜೀವನದ ಅಗಮ್ಯತೆ ಎಂಥ ಹರಿತವಾದ ಬುದ್ಧಿಗೂ ಮಂಕುಹಿಡಿಸಬಲ್ಲ ಈ ಚಕ್ರವ್ಯೂಹದಲ್ಲಿ ಒಂದು ಕ್ರಮವಿರಬಹುದೇ? ನಿಸರ್ಗದ ಚಲುವು-ನಿಲುವುಗಳಲ್ಲಿ, ಪಶುಜೀವನದ ಇರುವಿಕೆಯಲ್ಲಿ ಎಷ್ಟೇ ಸರಳವಾದರೂ ಒಂದು ಸಾಮಾನ್ಯ ತತ್ವ ಅಡಗಿದೆ. ಆದರೆ ಮನುಷ್ಯ ಇವುಗಳೊಡನೆ ಆಜನ್ಮಸಂಬಂಧವನ್ನಿಟ್ಟುಕೊಂಡೂ ತನ್ನದೊಂದು ಬೇರೆ ಆಟ ಹೂಡಿದ್ದಾನೆ. ಕಾಲವೀಥಿಯಲ್ಲಿ ನಡೆದ ಈ ಕೊನೆಯಿಲ್ಲದ ಯಾತ್ರೆಯ ಗುರಿಯಾದರೂ ಎಲ್ಲಿ? ವಿನಾಶದ ಕಡೆಗೋ, ಉದ್ಧಾರದ ಕಡೆಗೋ ಯಾರು ಹೇಳಬಲ್ಲರು? ಇಂಥ ಅಚಿಂತ್ಯ ಸಾಹಸಕ್ಕೆ ಮನುಷ್ಯನನ್ನು ಪ್ರೇರೇಪಿಸುವ ಶಕ್ತಿಯಾದರೂ ಯಾವದು? ವಿನಾಯಕರ ಈ ಪ್ರಶ್ನಜಾಲ ಕಾವ್ಯದ ತುಂಬ ಹರಡಿಕೊಂಡಿದೆ.

ಈ ಪ್ರಶ್ನೆಗಳಿಗೆಲ್ಲ ವಿನಾಯಕರು ಸಂಕ್ಷಿಪ್ತವಾಗಿ ಉತ್ತರ ಕೊಟ್ಟಿದ್ದಾರೆ. ಅವರು ಕೊಟ್ಟ ಉತ್ತರ ನಿರ್ಣಾಯಕವಾದದ್ದೆಂದೇನೂ ಅವರ ಹಟವಿಲ್ಲ. ಹಾಗೆ ನೋಡಿದರೆ ಜಗತ್ತಿನಲ್ಲಿ ಯಾವ ಉತ್ತರ ನಿರ್ಣಾಯಕವಾಗಿದೆ? ಆದರೆ ಹಾಗೆಂದು ಸುಮ್ಮನೆ ಕುಳಿತರೂ ಪ್ರಯೋಜನವಿಲ್ಲ. ಪ್ರಶ್ನೋತ್ತರಗಳ ಸಂಬಂಧ ದಾಂಪತ್ಯದ ಸಂಬಂಧದಂತೆ ಅನಿವಾರ್ಯವೂ ಹೌದು, ಸ್ಪೃಹಣೀಯವೂ ಹೌದು. 'ಬಾಳ

ದೇಗುಲದಲ್ಲಿ' ಎಂಬ ಕವನ ಈ ಉತ್ತರವನ್ನೊಳಗೊಂಡಿದೆ. ತಂದೆ, ತಾಯಿ, ಮಗು, ಹೆಂಡತಿ, ಕರ್ಮಯೋಗಿ, ಕಲಾವಿದ, ಯೋಗಿ, ದ್ರಷ್ಟಾರ, ಅಸುರ ಪತಿತ, ಅನುಭಾವಿ, ದಾನಿ, ಸುಧಾರಕ, ಮುಕ್ತಜೀವಿ, ಮೊದಲಾದ ಅಸಂಖ್ಯ ಮನುಷ್ಯ-ಮಾದರಿಗಳು ಒಂದಕ್ಕೊಂದು ಎಷ್ಟೇ ಭಿನ್ನವಾಗಿದ್ದರೂ, ಎಲ್ಲರೂ ಸೇರಿ ರುವದು ಬಾಳದೇಗುಲದ ಪ್ರಾಕಾರದಲ್ಲಿಯೇ. ಜೀವನದ ಈ ಅನೇಕಮುಖತೆ ವಿಸ್ಮಯಗೊಳಿಸುವಂಥದಾಗಿದೆ. ಈ ಜನಸಂದಣಿಗೆ ಬಾಳದೇಗುಲದ ಪ್ರಾಕಾರವು ಹಿಡಿಸದಾಗಿದೆ. ಆದರೆ ಈ ಸಂದಣಿ ನೆರೆದಿದ್ದುದರ ಉದ್ದೇಶವಾದರೂ ಏನು ದೇಗುಲದ ಗರ್ಭಗುಡಿಯ ಬಾಗಿಲು ಮುಚ್ಚಿದೆ. ಪ್ರತಿಯೊಬ್ಬರೂ ಅದು ತೆ ವುದನ್ನೇ ಕಾಯುತ್ತಿದ್ದಾರೆ, ಚಿಂತಿಸುತ್ತಿದ್ದಾರೆ, ಅವಸರಿಸುತ್ತಿದ್ದಾರೆ. ಅದರೇನು 'ಬಾಳ್ ಹೊರಗೆ ಬರಳು.' ಅವಳು ಬರುವ ವರೆಗೆ ಬಿಡುಗಡೆಯಿಲ್ಲವೇನೋ ಹೊರಗಿನ ಈ ಲೀಲೆಯೆಲ್ಲ ಅವಳದೇ! ದಶಾವತಾರಗಳೂ, ಮಹಾಮಹಿಮರೂ ಅವಳ ನೆಲೆಯನ್ನರಿಯಲು ಹೋಗಿ ಸೋತಿದ್ದಾರೆ.

> **“ ಏಸುಕ್ರಿಸ್ತನು ನಿನ್ನ**
> **ಬೆಸ್ತರವನಹುದು.**
> **ಕೃಷ್ಣಯಾದವ ನಿನ್ನ ಬೇಡರವನಹುದು**
> **ರಾಮರಾಘವ ನಿನ್ನ**
> **ಬಡಪಾಯಿಯಹುದು ”**

ಮರೆಗೆ ನಿಂತುಕೊಂಡು ಈ ಐಂದ್ರಜಾಲಿಕ ಸೂತ್ರವನ್ನಾಡಿಸುವವರ ರಹಸ್ಯ ವಾದರೂ ಏನಿದೆಯೋ!

ಈ ಕಾವ್ಯದ ಎರಡನೆಯ ಭಾಗದಲ್ಲಿ ಈ ಮನುಷ್ಯ-ಮಾದರಿಗಳ ವಿವ ಗಳಿಂದ ತುಂಬಿದ ಚಿತ್ರಣವಿದೆ. ಅದರಲ್ಲಿ ವಿನಾಯಕರು ಎರಡು ಉದ್ದೇಶಗಳನ್ನು ಸಾಧಿಸಿದ್ದಾರೆ. ಸಾಮಾನ್ಯವಾಗಿ ನೋಡಿದರೆ ಅದು ಮಾನವತೆಯ ಚಿತ್ರ. ಅದ ಆನುಷಂಗಿಕವಾಗಿ ಕವಿ ತನಗೆ ಸಂಬಂಧಪಟ್ಟ ವ್ಯಕ್ತಿಗಳ ಜೀವನವನ್ನೂ, ಭಾರತ ಹಾಗೂ ಕನ್ನಡಗಳ ರಾಷ್ಟ್ರಜೀವನವನ್ನೂ ಚಿತ್ರಿಸಿದ್ದಾನೆ. ಸಾಮಾನ್ಯವಾಗಿ ವಿನಾಯಕರ ಎಲ್ಲ ಕೃತಿಗಳಲ್ಲಿಯೂ ಈ ಒಲವು ಕಾಣುತ್ತದೆ; ಇಲ್ಲಿ ಅದು ಸುವ್ಯಕ್ತವಾಗಿ, ಕಾವ್ಯತಂತ್ರದ ಒಂದು ಅವಶ್ಯವಾದ ಭಾಗವಾಗಿ ಬಂದಿದೆ.

ಈ ಕಾವ್ಯವನ್ನೋದುವಾಗ ಕೆಲವು ಭಾಗಗಳಲ್ಲಿಯ ನೀರಸತೆ ಹಾಗೂ ಸಾಮಾನ್ಯತೆಗಳನ್ನು ಕಂಡು ಕೆಲವರಿಗೆ ಬೇಸರವಾಗಬಹುದು. ಕೆಲವೊಂದು

ಕಡೆಗೆ ಮಾತೇ ಹೆಚ್ಚಾಗಿ ಭಾವ ಮಲಗಿದಂತೆಯೂ ತೋರಬಹುದು; ಕೆಲವೆಡೆ ಗಳಲ್ಲಿ ವಾಗರ್ಥಗಳೆರಡೂ ಬಣ್ಣದ ವೇಷ ಹಾಕಿಕೊಂಡು ವ್ಯವಸಾಯದ ಕುಣಿತ ದಲ್ಲಿ ತೊಡಗಿರುವಂತೆಯೂ ಕಾಣಬಹುದು. ಆದರೆ ಇಂಥ ಹೊತ್ತಿನಲ್ಲಿ ಒಂದು ಮಾತನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ವಿನಾಯಕರಿಗಿರುವ ಕಾವ್ಯಪ್ರೇರಣೆ ಭಾವಗೀತಕ್ಕಿರುವ ಮೂಲಸ್ಫೂರ್ತಿಯ ಮಾದರಿಯದಲ್ಲ. ಒಂದು ಭಾವ ಸರಣಿಯೋ, ತತ್ವವಿನ್ಯಾಸವೋ ಅಥವಾ ಪ್ರಾದೇಶಿಕ ಕೌತುಕವೋ ಅವರ ಕೃತಿಗಳಿಗೆ ಕಾರಣವಾಗಿರುತ್ತವೆ. ಪ್ರತಿಯೊಂದು ಕವನವೂ ಅದಕ್ಕಾಧೀನವಾಗಿ ಅದರ ಒಂದು ಘಟಕವೂ ಆಗಿರುತ್ತದೆ. 'ಬಾಳದೇಗುಲ'ದಲ್ಲಿಯ ಕೆಲ ಕವನಗಳು ಸ್ವಯಂಪೂರ್ಣವಾಗಿವೆ. 'ಬಾಳದೇಗುಲದಲ್ಲಿ' ಎಂಬ ಕವನ ತನ್ನ ಉಜ್ವಲ ಭಾವ, ರಮ್ಯಕಲ್ಪನೆ, ವಾಗರ್ಥಗಳ ಅನ್ಯೋನ್ಯತೆಗಳೊಂದಿಗೆ ರಮಣೀಯವಾಗಿದೆ. 'ತಂದೆ' ಎಂಬ ಕವನದಲ್ಲಿಯ ಹೃದಯಸ್ಪಂದಿಯಾದ ಭಾವ ಮನವನ್ನು ಸೆಳೆಯ ಬಲ್ಲುದು. ಆದರೆ ಎಲ್ಲ ಕವನಗಳನ್ನೂ ಇಡಿಯಾಗಿ ಕಾವ್ಯೋದ್ದೇಶದ ಬೆಳಕಿನಲ್ಲಿ ಮಾತ್ರ ನೋಡಿದರೆ, ಅವುಗಳ ಅರ್ಥಪೂರ್ಣತೆ ಸುಗಮವಾದೀತು.

'ಬಾಳದೇಗುಲದಲ್ಲಿ' ಭಾವದ ಚಂಚಲತೆಗೆ ಬುದ್ಧಿಯ ಸ್ಥೈರ್ಯವನ್ನು ತಂದು ಕೊಡುವ ಸಾಹಸಗಳಲ್ಲೊಂದಾಗಿದೆ. ಕೆಲವು ಕಡೆಗೆ ಕಲ್ಪನೆಯಾಗಲಿ, ಕತೆಯಾಗಲಿ, ಈ ಕೆಲಸವನ್ನು ಮಾಡುತ್ತವೆ. ಈ ಕೃತಿಯಲ್ಲಿಯೂ ಅಂಥ ಒಂದು ರೂಪಕವಿದೆಯಾದರೂ, ಬುದ್ಧಿಯ ಗಂಭೀರತೆಗೇ ಹೆಚ್ಚು ಪ್ರಾಶಸ್ತ್ಯವನ್ನು ಕೊಡಲಾಗಿದೆ. ಆದರೆ ಇಲ್ಲಿ ಧ್ವನಿತವಾಗುವ ತತ್ವ ಎಲ್ಲಿಂದಲೊ ಕಡ ತಂದದ್ದಲ್ಲ. ಅನುಭವದ ಗೊನೆಗೇ ಬಿಟ್ಟ ಹಣ್ಣು ಅದು; ವಿನಾಯಕರ ಮಾಗಿ ಬಂದ ವ್ಯಕ್ತಿತ್ವದ ಫಲ ಅದು. 'ಕಲೋಪಾಸಕ'ದಲ್ಲಿ ಬೀಜರೂಪವಾಗಿ ಕಾಣಿಸಿಕೊಂಡ ಕನಸು, ಇಲ್ಲಿ ನನಸಾಗಿದೆ; ಅಷ್ಟೇ ಅಲ್ಲ, ಕಲ್ಲು ಇಟ್ಟಿಗೆಗಳಿಂದ ಕಟ್ಟಿದ ದೇಗುಲ ದಾತೆ ಮೂರ್ತವಾಗಿ ಕಣ್ಣಿನ ಬದುಕಾಗಿದೆ. ಶಿಶುವಿನ ಮುಗ್ಧಸ್ಮಿತ ಪ್ರೌಢನ ಗಂಭೀರ ಹಾಸದಲ್ಲಿ ಅರಳಿದಂತಿದೆ.

:: ೪ ::

ಮೊದಲೇ ಹೇಳಿದಂತೆ ವಿನಾಯಕರದು ಯಾತ್ರಿಕಜೀವ. ಪ್ರಯಾಣ ಮಾಡುವದು ಅದರ ಸ್ವಭಾವವಿಷ್ಟೇ ಅಲ್ಲ, ಅದರ ದೈವಸಂಕಲ್ಪವೂ ಆಗಿದೆ 'ಹಿಗ್ಗು' ಎಂಬ ಕವನಸಂಗ್ರಹಕ್ಕೆ ಇಂಥದೇ ಮತ್ತೊಂದು ಪ್ರಯಾಣ ಪ್ರೇರ ವಾಗಿದೆ. ಬಾಳದೇಗುಲದಲ್ಲಿ 'ಮುಂಗೈಯಾಸರೆ'ಯನ್ನು ಪಡೆದು ವಿಶ್ರಮಿಸಿದ ಹಕ್ಕಿ ಮತ್ತೆ ಅಂತರಿಕ್ಷದ ಪಯಣಕ್ಕೆ ಅಣಿಯಾಗಿದೆ. ಹರಿಯುವ ನೀರಿನಂ ಚಂಚಲತೆಯಿಂದ ಕುದಿಯುತ್ತಿರುವದೇ ಬದುಕೇನೋ ಎನಿಸುವಂತಿದೆ.

'ಮೀಸನಗರಕ್ಕೆಂದು ಕೈಯ ಬೀಸುತ ಬಂದೆ' ಎಂದು ಮೊದಲಾಗುವ ಕವ ದಲ್ಲಿ ಈ ನೋವು ಕಾಣುತ್ತಿದೆ. ಒಂದು ನಿಮಿಷ ನೆಲೆ ತಪ್ಪಿದ ಭಾವವೂ ಮೂಡ ತ್ತದೆ. ಹೊಸ ನಾಡಿನಲ್ಲಿಯ 'ಶೀಲದುಶ್ಶೀಲಗಳನುಂಡು' ಮಾಗಬೇಕಾಗಿ ಜೀವ ನಿಜ. ಆದರೆ ಈ ಪರೀಕ್ಷೆ ಮುಗಿಯಬೇಕಾದರೂ ಎಂದಿಗೆ? "ಕೃಷ್ಣೆಗೋದ ವರಿಯರೆಡೆತಂತಿ ಮೀಟಿ" ನಡೆವಾಗೆಲ್ಲ ಕವಿ ಇದನ್ನೇ ಧೇನಿಸುತ್ತಿದ್ದಾನೆ ಹೊಸ ದೇಶ ಪ್ರಯಾಣದ ಒಂದು ಕುತೂಹಲವಾಗಿ ಕಂಡರೂ, ಅಲ್ಲಿ ಮನ ಹೂಡುವದೆಂತು? ಆದರೆ ವಿನಾಯಕರ ಜೀವನಶ್ರದ್ಧೆ ಇಲ್ಲಿಯೂ ಅವರಿ ಬಲವನ್ನಿತ್ತಿದೆ. ನಾಡು ಹೊಸದಾದರೇನು? ಇಲ್ಲಿರುವದೂ ಅದೇ ನೆಲ, ಅದೆ ಆಕಾಶವಲ್ಲವೇ? ಇಲ್ಲಿಯೂ ಮನುಷ್ಯ ಸಂಸಾರ ಹೂಡಿಲ್ಲವೇ? ಬದುಕು ನ ದಿಲ್ಲವೇ? ವಿನಾಯಕರಲ್ಲಿ ಅಂತಸ್ಥನಾಗಿರುವ ಚಿರಪ್ರಯಾಣಿಕ ಇದೇ ಪ್ರಶ್ನೆ ಯನ್ನು ಕೇಳುತ್ತಾನೆ. ಮನೆಯಲ್ಲಿಯೇ ಕುಳಿತುಕೊಂಡು ಬಾಳದೇಗುಲವನ್ನು ಚಿತ್ರಿಸಿಕೊಂಡರೆ ಸಾಲದು. ಮಾನವಕುಲ ಒಂದಾಗಬೇಕೆಂಬ ಆದರ್ಶವುಳ್ಳವರ ಇಂಥ ಅಗ್ನಿದಿವ್ಯಗಳಲ್ಲಿ ಹಾಯ್ದುಹೋಗಲೇಬೇಕು. ಅದೇ ದೈವನಿಯಮ.

'ಅಚ್ಚ' ಎಂಬ ಇನ್ನೊಂದು ಮನೋಜ್ಞವಾದ ಭಾವಗೀತದಲ್ಲಿ ಈ ಕಲ್ಪನೆ ರಮ್ಯವಾಗಿ ಅರಳಿ ಬಂದಿದೆ. ಹೀಚುಗಾಯಿಯೊಂದರಲ್ಲಿ ಈ ಅಚ್ಚ ಮಲಗಿದ್ದಾಗ ಅದು ದಿಗಂತದಲ್ಲಿಯೇ ಪ್ರಯಾಣ ಹೂಡುವದೆಂದು ಯಾರು ತಿಳಿದಿದ್ದರು? ಅದ ಹೊರಗೆ ಬಂದೊಡನೆ ಅರುಣ-ಕಿರಣಗಳು ಅದನ್ನು ಮುದ್ದಿಸಿ ಈ ಸಂದೇಶವನ್ನು ಹೇಳಿ ಹೋಗಿರಬೇಕು. ಮೇಲೆ ಹೋದಂತೆ ಈ ಮೇದಿನಿ ಮರೆಯಾಗಬಹುದು ಸರ್ಪವೇಣಿಯಾದ ಪ್ರಕೃತಿ ಹಾಗೂ ಸರ್ಪಭೂಷಣನಾದ ಪುರುಷ ಇವ

ದ್ವಂದ್ವ, ಭೀತಿಯನ್ನು ಹುಟ್ಟಿಸಬಹುದು. ಆದರೆ ಹುಟ್ಟುತ್ತಲೇ ಪ್ರಯಾಣದ ದೀಕ್ಷೆಯನ್ನು ಪಡೆದುಕೊಂಡು ಬಂದ ಅಜ್ಜಕ್ಕೆ ಭಯವೆಲ್ಲಿ? ಭೂಮಿಯಿಂದ ಮುಗಿಲ ವರೆಗೆ ತಿರುಗಾಡಿ, 'ಬಾಳಿದೊಂದು ಲೀಲೆಯಹುದು' ಎಂಬ ತತ್ವ ದೊಂದಿಗೆ ಈ ಕವನ ಮುಗಿಯುತ್ತದೆ. ಸ್ವಂತ ಅನುಭವದ ಜೀವಂತ ಚಿತ್ರಣ, ಅಜ್ಜನ ಸಮ್ಮೋಹಕ ಲೀಲೆ, ಹಾಗೂ ಜೀವನವನ್ನೇ ಒಂದು ದಂತಕತೆಯಂತೆ ನೋಡುವ ರಮ್ಯ ಕುತೂಹಲ, ಈ ಕವನಕ್ಕೆ ವಿಶೇಷ ಕಾಂತಿಯನ್ನು ಕೊಟ್ಟಿವೆ.

ಈ ಸಂಗ್ರಹದ ಕೊನೆಯ ಕವನದಲ್ಲಿ ಕವಿ ಹಿಂದಿರುಗಿದ ಸನ್ನಿವೇಶವಿದೆ. ಅದರೊಂದಿಗೆ ಹೊಸ ಅನುಭವದ ದರ್ಶನವೂ ಇದೆ. ಅಗಲಿಕೆಯ ನೋವು ಕೂಡ ಬಾಳನ್ನು ವಿಷಮಯವಾಗಿಸದೆ, ಇನ್ನೊಂದು ಮಿಲನದ ಸೂಚನೆಯನ್ನೇ ಕೊಡು ತ್ತಿದೆ. ಅಪರಿಚಯದ ನಾಡಿನಲ್ಲಿ ಪರಿಚಯದ ಕರುಣೆ ಸುರಿದು ಕಾಯಲಿಲ್ಲವೇ? ಹೊರಟು ನಿಂತಾಗ ಕವಿಯ ಮನಸ್ಸಿನಲ್ಲಿ ಇದೇ ವಿಚಾರಮಂಥನ ಸಾಗಿದ ವರ್ಣನೆ ಹೃದಯವೇಧವಾಗಿದೆ.

'ಉಗಮ'ವನ್ನು ಹದಿನಾರು ಅಧ್ಯಾಯಗಳ ಒಂದು ಕವನವೆಂದು ವಿನಾ ಯಕರು ಕರೆದಿದ್ದಾರೆ. 'ಕಲೋಪಾಸಕ'ದಲ್ಲಿಯ ನೀಳ್ಗವನದ ರೂಪ ಇಲ್ಲಿ ಪುನರುಕ್ತವಾದಂತಿದೆ. ಮಹಾಬಳೇಶ್ವರದಲ್ಲಿ ಕೃಷ್ಣೆಯ ಉಗಮವನ್ನು ನೋಡಿ ಸ್ಫೂರ್ತಿಗೊಂಡ ಮನಸ್ಸು ಅಲ್ಲಿ ಬಾಳಿನ ಉಗಮವನ್ನೂ ಕಂಡಿದೆ. ಪ್ರಕೃತಿಯ ಅನಂತವೈಭವ, ಅದರಡಿಯಲ್ಲಿಯೇ ಜೀವನವನ್ನು ರೂಪಿಸಿದ ಪ್ರಾಚೀನ ಕಾಲದ ಮಾನವನ ಸಾಹಸ, ಆಧುನಿಕ ನಾಗರಿಕತೆಯ ಕರುಹುಗಳು, ಇಂದಿನ ಸ್ಥಿತಿ-ಗತಿ ಇವೆಲ್ಲ ಕ್ರಮವಾಗಿ ಒಂದು ಪೌರಾಣಿಕ ಕತೆಯನ್ನೂ, ಇತಿಹಾಸವನ್ನೂ ನವ್ಯ ಕಾವ್ಯವನ್ನೂ ರೂಪಿಸಿವೆ. ಬೇರೆ ಬೇರೆ ಕಾಲದ ಈ ಚಿತ್ರಗಳನ್ನೆಲ್ಲ ಒಂದರ ಜೊತೆಗೊಂದರಂತೆ ಹೋಲಿಸಿ ನೋಡಿದಾಗ ಒಂದು ಆಳವಾದ ವ್ಯಂಜ್ಯಕತೆ ಮಿಡಿಯುತ್ತಿದೆ. ಆ ಎಲ್ಲ ಚಿತ್ರಗಳ ಸುತ್ತಲೂ ಹಬ್ಬಿ ಕಾವ್ಯದಲ್ಲಿ ಒಡಮೂಡಿದ ಪ್ರತೀಕಾತ್ಮಕವಾದ ಒಂದು ರೂಪಕ ಅರ್ಥಪೂರ್ಣವಾಗಿದೆ.

ಕಾವ್ಯೋದ್ದೇಶ ಇನ್ನೊಂದು ದೃಷ್ಟಿಯಿಂದಲೂ ಇಲ್ಲಿ ಸಫಲವಾಗಿದೆ. ವಿನಾಯಕರ ವ್ಯಕ್ತಿತ್ವದ ಇನ್ನೊಂದು ಪರಿಯನ್ನೂ ಅದು ತೆರೆದು ತೋರುತ್ತದೆ. ಇಲ್ಲಿ ಮೂಡಿರುವ ಚಿತ್ರಗಳ ನಡುವಿರುವ ಶೂನ್ಯವನ್ನು ಅವರ ವ್ಯಕ್ತಿತ್ವ ತುಂಬಿ ಕೊಂಡಿದೆ. 'ಸಮುದ್ರಗೀತಗಳ'ನ್ನು ಬರೆದಾಗಿನ ಸಂದರ್ಭವೇ ಮತ್ತೆ ಇಲ್ಲಿ

ಬಂದಿದೆ. ಇಲ್ಲಿರುವ ಮಹತ್ವದ ಅಂತರವೆಂದರೆ ಕವಿಯ ವ್ಯಕ್ತಿತ್ವದಲ್ಲಿ ಬೆಳವಣಿಗೆ. ಆಗಿನ ಸಾಹಸದ ಉತ್ಸಾಹವಾಗಲಿ, ವೇಗವಾಗಿ ಹರಿಯುವ ಭಾ ವೇಶವಾಗಲಿ ಇಲ್ಲಿ ಇಲ್ಲ. ಬೆಟ್ಟದ ಶಿಖರದಂತೆ ಊರ್ಧ್ವಗಾಮಿಯಾಗು ಹಂಬಲ ಇಲ್ಲಿ ತುಂಬಿದೆ.

ನದಿಯ ಉಗಮವನ್ನಷ್ಟೇ ಅಲ್ಲ, ಬಾಳಿನ ಉಗಮವನ್ನೂ, ಸ್ವಂತ ವ್ಯ ತ್ವದ ಉಗಮವನ್ನೂ ವಿನಾಯಕರು ಇಲ್ಲಿ ಕಂಡಿದ್ದಾರೆ. ಇಲ್ಲಿಯ ವರೆಗೆ ವ್ಯಕ್ತಿ ಅಭಿಮಾನದ ಸೆರೆಯಲ್ಲಿ ಬದ್ಧವಾಗಿತ್ತು. ಒಳಗಿನಿಂದ ಹೊರಗೆ ಹರಿಯುತ್ತಿತ್ತು ಕನಸಿನೆಡೆಗೆ ಧಾವಿಸುತ್ತಿತ್ತು, ಬೆಳಕನ್ನುಣ್ಣಲು ಹಾತೊರೆಯುತ್ತಿತ್ತು. ಆದ ಮರಳಿ ತನ್ನ ಗೂಡಿಗೆ ತಾನು ಬಂದಾಗ ಮತ್ತೆ ಬಂಧನ ಬಿಗಿಯುತ್ತಿತ್ತು. ಒಂ ಕ್ಷಣವಾದರೂ ಆಗಲಿ ಇಲ್ಲಿ ಬಂಧನ ಕಳಚಿದೆ. ಜೀವ ತಾನೂ ಸುತ್ತಲಿನ ಬಯ ನಲ್ಲಿ ಒಂದು ಎಂದು ತಿಳಿದುಕೊಂಡಿದೆ. ಉಳಿವ ಜೀವನ ಬೇಡವಾಗಿ, ಉಗಮ ನೀರನ್ನೆ ಸವಿಯೋಣವೆಂದು ಕವಿ ಆ ನೀರಿಗೆ ಕೈಯೊಡ್ಡಿದ ಕ್ಷಣದಲ್ಲಿ ಅಪೂರ್ವ ಭಾವವೊಂದು ಸ್ಫುರಿಸುತ್ತಿದೆ :

**ಅನಂತದ ನಿಧಿಯದು. ಕಾಲನ ಪ್ರತಿನಿಧಿಯು ನಾನು**
**ನನ್ನಂತೆಯೇ ಹಿಂದೆ**
**ಬೇರೆ ವಂಶಗಳು ಬಂದವು; ಕುಲಗಳು ಬಂದವು**
**ಬರಲಿಹವು ಮುಂದೆ.**

ಊರ್ಧ್ವಗಾಮಿಯಾಗಲೆಳಸಿದ ಜೀವಕ್ಕೆ ಇನ್ನೊಂದು ಅವಕಾಶ 'ದ್ಯಾ ಪೃಥಿವೀ'ಯಲ್ಲಿ ದೊರೆತಿದೆ. ಆಕಾಶದಲ್ಲಿ ಅಲೆಯುವ ಮೋಡಗಳ ದಂ ಭೂಮಿಯ ಹೃದಯದಲ್ಲಿ ಸಂಚರಿಸುವ ಕನಸುಗಳ ಪ್ರತಿಬಿಂಬದಂತೆ ಕಾ ಒಂದು ಕ್ಷಣವೂ ನಿಲ್ಲದಂತೆ ತಿರುಗಾಡಿ, ಬೆಳೆದು, ಕ್ಷಣಕ್ಕೊಂದು ರೂಪ ಧರಿಸು ನೀರದ, ಸಂಚಾರದ, ಚಿರಪ್ರಯಾಣದ ನಾರದಸೂತ್ರವನ್ನೇ ಉಸಿರುವಂತಿ ಆದರೆ ಇಲ್ಲಿಯ ಪ್ರಯಾಣದ ಸ್ವರೂಪವೇ ಬೇರೆ. ಮೊದಲಿನಂತೆ ಅದ್ಭುತರ ಸ್ವಪ್ನವೊಂದರ ಬೆನ್ನುಹತ್ತಿ ಅಲೆಯುವದಲ್ಲ; ಪ್ರಾದೇಶಿಕ ಕುತೂಹಲದ ಹಿಂ ಸಾಗುವದೂ ಅಲ್ಲ; ವಿಕಾಸ, ಊರ್ಧ್ವಗಾಮಿತ್ವ ಇವೇ ಪ್ರಯಾಣದ ಮು ಲಕ್ಷಣಗಳಾಗಿವೆ.

'ನೀರದ'ದಲ್ಲಿ ಭೂಮಿಯಿಂದ ಮುಗಿಲತ್ತಣ ವಿನಾಯಕರು ನೋಟ ಬೀ

ದ್ದಾರೆ. "ಇಳಾಗೀತ"ದಲ್ಲಿ ಮುಗಿಲಿನಿಂದ ಇಳೆಯ ಕಡೆಗೆ ನೋಟ ಬೀರಿದ್ದಾರೆ. ಬಾಳನ್ನು ಭೂಮಿಯ ಪಾತಳಿಯಿಂದ ನೋಡಿದಾಗ ಕಾಣುವ ದೃಶ್ಯ ಬೇರೆ, ವಿಹಂಗಮನೋಟದಿಂದ ನೋಡಿದಾಗ ಕಾಣುವ ದೃಶ್ಯ ಬೇರೆ. ಪ್ರಕೃತಿಯ ಸನಾತನ ದೃಶ್ಯವಿವೆ, ಇತಿಹಾಸದ ರಾಜಮಾರ್ಗಗಳಿವೆ, ಪೌರಾಣಿಕ ಕಲ್ಪನೆಯ ಚಿತ್ರಗಳೂ ಇಲ್ಲಿವೆ, ಆಧುನಿಕ ನಾಗರಿಕತೆಯ ಚಿತ್ರ-ವೈಚಿತ್ರಗಳೂ ಇಲ್ಲಿವೆ. ಎರಡೊಂದು ರೀತಿಯ ಪ್ರಯಾಣ ಇಲ್ಲಿ ವರ್ಣಿತವಾಗಿದೆ.

ವಿನಾಯಕರ ಕಾವ್ಯತಂತ್ರದ ವಿಕಾಸ ಇಲ್ಲಿ ಪರಿಪೂರ್ಣತೆಯನ್ನು ಮುಟ್ಟಿದೆಯೆನ್ನಬಹುದು. ಮೂಲಭಾವ ತನ್ನ ತೀವ್ರತೆಯೊಂದಿಗೆ ವಿಸ್ತಾರವನ್ನೂ ಪೂರ್ಣತೆಯನ್ನೂ ಪಡೆದಿದೆ. ಇದಕ್ಕಾಗಿ ಕಾವ್ಯದಲ್ಲಿ ಉಪಯೋಗಿಸಿದ ಭವ್ಯ ರೂಪಕ (Myth)ವೇ ಸಹಾಯವಾಗಿದೆ. ಇಕ್ಷ್ವಾಕುವಿನ ಮೋಹಕವಾದ ಕತೆ ಗ್ರೀಕ್ ಹಾಗೂ ಭಾರತೀಯ ಪುರಾಣಕಲ್ಪನೆಗನ್ನೊಳಗೊಂಡು ಕಾವ್ಯಕ್ಕೆ ತಳಹದಿಯಾಗಿರುವ "ಮೇಘತತ್ವ"ವನ್ನು ಸುಂದರವಾಗಿ ವ್ಯಕ್ತಪಡಿಸಿದೆ. ನೆರಳಿಗೆ ಹುರುಳು ಕೊಟ್ಟ ಉತ್ತರ ಅಲ್ಲಿದೆ.

ವಿನಾಯಕರ ಕಾವ್ಯಯಾತ್ರೆಯ ಸಕೃತ್‌ದರ್ಶನ ಮಾತ್ರ ಇಲ್ಲಿ ಚಿತ್ರಿತವಾಗಿದೆ. ಕಾವ್ಯದಲ್ಲಿ ವ್ಯಕ್ತಿತ್ವವನ್ನು ಮರೆಸಿದವರಿದ್ದಾರೆ; ವ್ಯಕ್ತಿತ್ವವನ್ನು ಮೆರೆಸುವದಕ್ಕಾಗಿಯೇ ಕಾವ್ಯವನ್ನು ಬರೆದವರೂ ಇದ್ದಾರೆ; ಕಾವ್ಯಕ್ಕಾಗಿಯೇ ವಿಶಿಷ್ಟವಾದ ಒಂದು ವ್ಯಕ್ತಿತ್ವವನ್ನು ಸೃಷ್ಟಿಸಿಕೊಂಡವರೂ ಇದ್ದಾರೆ. ಆದರೆ ಸ್ವಂತ ವ್ಯಕ್ತಿತ್ವದ ಸಹಜ ಉನ್ಮೇಷಕ್ಕೆ ಕಾವ್ಯವೇ ಸಹಜ-ಮಾಧ್ಯಮವೆಂದು ತಿಳಿದು ಕಾವ್ಯವನ್ನೂ ವ್ಯಕ್ತಿತ್ವವನ್ನೂ ಪರಸ್ಪರ ಬೆಳಗುವಂತೆ ಮಾಡುವ ದಿವ್ಯ ಪ್ರತಿಭೆ ವಿನಾಯಕರದೇ ಎಂದು ಹೇಳಬಹುದು.

# ಸಮನ್ವಯಶ್ರೀ : ವಿನಾಯಕರ ನವ್ಯಕಾವ್ಯಮಾರ್ಗ

" For arrogance and hatred are the wares
Peddled in the thoroughfares.
How but in custom and in ceremony
Are innocence and beauty born ?"

..A prayer for my daughter (1921): W. B. Yeats

"ಮಲ್ಲಿಗೆಯ ಬೆಳಕಿಗೆ ಬೆಳ್ಳ ಬೆಳಕಾಗಿತ್ತ !
ಚಿಗೀಯಿತು ನನ್ನ ಎದೆಕೊನರು
ಚಿಗೀಯಿತು ನನ್ನ ಎದೆಕೊನರು
ಆಗೋಣ ಮುಕ್ತಿಕೇತನರು"

—ಮುಗಿಲ ಮಲ್ಲಿಗೆ : ವಿನಾಯಕ

: ೧ :

ಕನ್ನಡದ ನವ್ಯಕಾವ್ಯವು, ಇಟಲಿಯ ನೃತ್ಯಮಂದಿರದ ರೋಮಾಂಚಕಾರಕ ಪರಿಸರದಲ್ಲಿ ಮತ್ತು ಇಂಗ್ಲಿಷ ಕಡಲಿನ ಘೋಷಾರವದ ಹಿನ್ನೆಲೆಯಲ್ಲಿ ಜನ್ಮ ತಳೆಯಿತೆಂದು ಹೇಳಿದರೆ, ನವ್ಯಕಾವ್ಯದಷ್ಟೇ ಈ ಮಾತು ಅಗಮ್ಯವಾದೀತು. ಆದರೆ ವಸ್ತುಸ್ಥಿತಿಯೇ ಅಷ್ಟು ಆಶ್ಚರ್ಯಜನಕವಾಗಿದೆ.

ಮಾತೃಭೂಮಿಯಿಂದ ಶಿಕ್ಷಣ ಪಡೆಯಲು ಪರನಾಡಿಗೆ ಪ್ರಯಾಣ ಬೆಳೆಸಿದ ಈರ್ವರಿಂದ ನವ್ಯಕಾವ್ಯಕ್ಕೆ ನಾಂದಿಯಾಯಿತು. ಆದರೆ ಅವರೀರ್ವರ ಅಭಿವ್ಯಕ್ತಿ ಬೇರೆಬೇರೆಯಾದರೂ, ಅವೆರಡೂ ಸಹಜವಾದವುಗಳೂ ಮತ್ತು ಪ್ರಾಮಾಣಿಕವಾದವುಗಳೂ ಆಗಿವೆ. ಮೊದಲನೆಯದು – ಉನ್ಮಾದ, ಮಿಂಚು, ವಿಷಮ ಸೌಂದರ್ಯದ ಅನಿವಾರ್ಯ ಸೆಳೆತ–ಇವುಗಳ ರಮ್ಯ, ಭಯಾನಕ ಅಭಿವ್ಯಕ್ತಿ

ಯುಳ್ಳ ಪೇಜಾವರ ಸದಾಶಿವರಾಯರ 'ನಾಟ್ಯೋತ್ಸವ'ವೆಂಬ ಕವನ. ಎರ
ಯದು, ತೀರ ಒಮ್ಮೆಲೇ ನವ್ಯವಾಗದಿದ್ದರೂ, ಪ್ರಗತಿಶೀಲವಾಗಿ ಕ್ರಾ
ಗಿಂತಲೂ ಉತ್ಕ್ರಾಂತಿಯಲ್ಲಿ ನಂಬುಗೆಯನ್ನಿಟ್ಟು, ಹೊಸದರಲ್ಲಿ ಪ್ರಸ
ಯನ್ನು ನಿರ್ಮಿಸುವ, ಭಾರತೀಯ ಪರಂಪರೆಯ ಉನ್ನತ ಸಂಸ್ಕಾರ ಹೊಂದಿ
ವಿನಾಯಕರ ವ್ಯಕ್ತಿದರ್ಶನದ "ಸಮುದ್ರಗೀತೆಗಳು."

ಸದಾಶಿವರಾಯರ 'ನಾಟ್ಯೋತ್ಸವ'ವು ನವ್ಯಕಾವ್ಯದ ಇತಿಹಾಸದಲ್ಲಿ
ಒಂದು ಕೌತುಕದ ಘಟನೆಯಾಗಿದೆ. ಅದು ನವ್ಯರ ಪ್ರತೀಕವಾದ, ಪ್ರತಿವ
ವಾದಗಳ ತಂತ್ರಗಳನ್ನು ಒಳಗೊಂಡಿದೆಯಷ್ಟೇ ಅಲ್ಲದೆ ನವ್ಯರ ಮನೋಭೂ
ಕೆಯೂ ಅದಕ್ಕಿದೆ. ಒಂದು ದೃಷ್ಟಿಯಿಂದ ಈ ಕವನದ ಹುಟ್ಟು 'Parthe
genesis' ತತ್ವದ ಮೇಲೆ ಆಯಿತೆಂದು ಹೇಳಬಹುದು. ಕವಿಯು ಇಟಲಿ
ನೃತ್ಯಮಂದಿರದ ಝಾಜ್‌ಗಾನದ ಸಂಗೀತದಲ್ಲಿ ಮೈಮರೆತಿದ್ದಾನೆ. ಮದಿ
ಮಬ್ಬಿನಲ್ಲಿ, ಸುತ್ತಲಿನ ಉನ್ಮತ್ತ ವಾತಾವರಣ ಆವನ ಮನಸ್ಸನ್ನು ಕದಡಿ

"ಅರಳುತಿರುವ ಮರಳು ನಗೆ
ಸಾವಿರ ಸಿಗರೇಟ ಹೊಗೆ
ಮಧುವಿನಲ್ಲಿ ಮಿಂದ ಮದವು
ಮನಸ ಕೆದರಿದೆ"

ಎಂದು ಹೇಳಿ ಕಾರ್ಯಪ್ರವೃತ್ತನಾಗಲು ತನ್ನನ್ನೇ ತಾನು ಆಮಂತ್
ಕೊಳ್ಳುತ್ತಿದ್ದಾನೆ. ಈ ಉನ್ಮತ್ತಮನಸ್ಥಿತಿಯಲ್ಲಿ – ಸುತ್ತಲಿನ ಧೀವರಿಯ
ಬಲೆಗೆ ಒಳಗಾಗುತ್ತಾನೆ. ಈ ಅಧೀನತೆಯು ತನ್ನ ನಿಸ್ಸಹಾಯಕತೆಯ
ವೆಂದು ಒಪ್ಪಿಕೊಳ್ಳುತ್ತಾನೆ :

'ಒಂದು ರಾತ್ರಿ ಒಮ್ಮೆ ಸೊಕ್ಕಿ
ಶಾಸ್ತ್ರಗಳ ದೂಡ್ಯೇನ!
ಇಂದು ರಾತ್ರಿ ಬಂದ ಹಾಗೆ
ನನ್ನ ಬಾಳ ಮಾಡ್ಯೇನ.
ಪೃಥಿವಿಯಿದರ ಮಡಿಲನೊಕ್ಕಿ
ಸಾರವನ್ನು ನೋಡ್ಯೇನ !
ಮಿಂಚಿನೊಡನೆ ಮಿಂಚುತೊಮ್ಮೆ
ಕತ್ತಲೆಯನೆ ಕೂಡ್ಯೇನ."

ಕವಿಯು ಬೆಳಕನ್ನು ಇಚ್ಛಿಸದೆ, 'ಕತ್ತಲೆಯನೆ ಕೊಡ್ಯೇನ' ಎಂದು ಹೇಳುವ ಅವನ ಮನೋವೃತ್ತಿಯು ಅನಿವಾರ್ಯ ಪಾಪಕ್ಕೆ ಶಿಕ್ಷೆಯನ್ನು ಅನುಭವಿಸುವದಾದರೆ, ಅಂಥದಕ್ಕೆ ತಾವು ಸದಾ ಸಿದ್ಧವೆಂದು ಹೇಳುವ ನವ್ಯರ ದಿಟ್ಟ ಮನೋವೃತ್ತಿಯು ದುರಂತ ಸೌಂದರ್ಯದ (Tragic beauty) ಒಂದು ಅನುಭವವನ್ನು ನಮಗೆ ಮಾಡಿಕೊಡುತ್ತದೆ. ಮಿಂಚು ಮತ್ತು ಕತ್ತಲೆಯ ಅತಿ ಬಲವತ್ತರವಾದ ವೈಷಮ್ಯಗಳನ್ನು ಏಕಕಾಲಕ್ಕೆ ವಹಿಸಿಕೊಳ್ಳುವ ಕವಿಯ ರೀತಿಯು ಪಾಪದ ಪವಿತ್ರ ದಾರ್ಢ್ಯವನ್ನು ಪ್ರದರ್ಶಿಸಿ ನವ್ಯರ ಒಂದು ಬೆಳಕಿನ ಮುಖವನ್ನು ನಮ್ಮೆಡೆಗೆ ತಿರುಗಿಸುತ್ತದೆ.

ವಿನಾಯಕರ ನವ್ಯದೃಷ್ಟಿ ಮಾತ್ರ ಇದಕ್ಕಿಂತ ವಿಭಿನ್ನವಾದುದು. ಅದು ಮೂಲದಲ್ಲಿ, ಈ ಮೊದಲೇ ಹೇಳಿದಂತೆ, ಪ್ರಗತಿಶೀಲ ದೃಷ್ಟಿಯದು. ಹೊಸದನ್ನು ಭಾರತೀಯ ಪರಂಪರೆಗೆ ಅನುಗುಣವಾಗಿಸಿಕೊಂಡು ಸ್ವೀಕರಿಸುವ ದೃಷ್ಟಿ. ಸಮನ್ವಯದ ಭದ್ರ ತತ್ವ ಅದನ್ನೂ ರೂಪಿಸಿದೆ. ಅಂತಲೇ ಸಮುದ್ರವನ್ನು ಮೊದಲು ಕಂಡಾಗ ವಿನಾಯಕರು ಪ್ರದರ್ಶಿಸುವ ಭಾವ, ಉನ್ಮಾದವಲ್ಲ; ಆದರೆ ಉನ್ಮಾದವನ್ನು ಸ್ತಿಮಿತದಲ್ಲಿಟ್ಟುಕೊಂಡ ಅನುಪಮ ಪ್ರಸನ್ನಭಾವ :

> **"ಕಂಡೆ ! ನಿನ್ನನ್ನು ಮೊದಲಿಗೊಮ್ಮೆ ಕಂಡೆ**
> **ಓ ! ಸನಾತನ ಸಮುದ್ರರಾಜ !**
> **ಸಂಕ್ರಾಂತಿಪುರುಷ ! ಓ !**
> **ಹಳೆಯದನೆಲ್ಲ ಒಳಗೊಳಗೆ ಕಾಯ್ದು**
> **ಹೊಸದನೆಲ್ಲ ಹೊರಗೆ ಸೂರೆಗೆಯ್ದು**
> **ಚಿರಸನಾತನನಾಗಿ**
> **ಪುನರ್ನವನಾಗಿ**
> **ಸಲಿಲಲೀಲೆಯುಲಿರುವ ಚೈತನ್ಯವೇ !**
> **ಸುಮನಹೋರ ಮೂರ್ತಿ."**

ಸಮುದ್ರದಂತೆ 'ಚಿರಸನಾತನವಾಗುವ' ಮತ್ತು 'ಪುನರ್ನವವಾಗುವ' ಆರ್ಷದೃಷ್ಟಿಯು, ಭಾರತೀಯ ಕಾವ್ಯಪರಂಪರೆಯ ಸಾರವನ್ನು ಹೀರಿದ ವಿನಾಯಕ-ಕಾವ್ಯಕ್ಕೆ ತೀರ ಸಹಜವಾದುದು. ಹೊಸದನ್ನು ಕಂಡಾಗ ಅವರು ಅದರ ಅಗಮ್ಯ ತತ್ವವನ್ನು ಒಪ್ಪಿಕೊಂಡು – ಪರಂಪರೆಯಲ್ಲಿ ಅದನ್ನು ಅರಗಿಸಿ

ಕೊಳ್ಳುತ್ತಾರೆ. ಅವರ ಸಮುದ್ರಗೀತೆಗಳಲ್ಲಿ ಮೊದಲು ಬರುವ ‘ಪ್ರತಿಜ್ಞೆ’ಯು
ಕವಿಯ ಕಾವ್ಯಪ್ರತಿಜ್ಞೆಯೂ ಆಹುದು.

> “ಅಬ್ಜ ಶಬ್ದಗಳ ಸ್ರಾರಬ್ಧದಲ್ಲಿ ಸಹ
> ಮಹಾಬ್ಧಿಯ ಕಣವೊಂದು ಸೆರೆ ಸಿಕ್ಕದಯ್ಯ!
> ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು”

ಹೊಸದರ ಪ್ರತಿನಿಧಿಯಾದ ಶರಧಿಯ ಸ್ವಾತಂತ್ರ್ಯವನ್ನು ಒಪ್ಪಿಕೊಂಡು
ಅದನ್ನು ತನ್ಮಳವಿನಲ್ಲಿ ತಂದು ಅದರ ಅಮಿತ ಸ್ವಾತಂತ್ರ್ಯಕ್ಕೆ ತಮ್ಮನ್ನು
ಮಾರ್ಪಡಿಸಿಕೊಳ್ಳುವ ನೋಡಿ ವಿನಾಯಕರ ಕಾವ್ಯಕ್ರಿಯೆ:-

> **“ಜೀಡಯ್ಯ ಬಂಧಗಳ ಬಂದಿವಾಸ;**
> **ಸಾಕಯ್ಯ ವೃತ್ತಿಗಳಾವರ್ತ:**
> **ನಿನ್ನ ಮಣಿತವಿರಲಿ ಸಮುದ್ರದ ಕುಣಿತದಂತೆ!**
> **ತರಂಗತ್ತರಂಗಗಳನ್ನೊಳಕೊಂಡ**
> **ನವರಂಗ ವಾರಿಧಿಯಂತೆ**
> **ವೃತ್ತಬಂಧಗಳು ಸಂಧಿಸಿ ಬಂದ**
> **ಸಮುದ್ರವಾಗು, ಕವಿಯೇ!**
> **ಕವಿಗಳ ಸಮುದ್ರಗುಪ್ತನಾಗು.**

ಇಲ್ಲಿಯ ನವರಂಗವಾರಿಧಿಯು – ಅವರ ಸಮನ್ವಯ ತತ್ವದ ಪ್ರತೀಕ
ವಾಗಿ, ವೈವಿಧ್ಯತೆಯಲ್ಲಿ ಐಕ್ಯತೆಯ ತತ್ವವನ್ನು ತೋರಿಸುತ್ತದೆ.

ಅಸಮಬಲನಾದ ಚಕ್ರವರ್ತಿಯೋರ್ವನ ಪ್ರಭುತ್ವವನ್ನು, ಮುತ್ಸದ್ದಿ
ಯಾದ ಮಾಂಡಲಿಕನು ಒಪ್ಪಿಕೊಂಡು, ಆ ಚಕ್ರವರ್ತಿಯ ಮನವೊಲಿಸಿ ಅವನ
ಸಮದಂಡಿಯಾಗಿ ಮೆರೆಯುವಂತೆ, ವಿನಾಯಕರ ಕಾವ್ಯಕ್ರಿಯೆಯು ಪರಿಸರದ
ಪ್ರಭುತ್ವವನ್ನು ಒಪ್ಪುತ್ತದೆ. ಈ ವೃತ್ತಿ Classicismದ ವೃತ್ತಿ. ಪರಿಸ
ದೊಂದಿಗೆ ತಾದಾತ್ಮ್ಯ (Harmony)ವನ್ನು ಹೊಂದುವದೇ ಇದರ ಗುರಿ
ಅಂತಲೇ ಅತಿ ಪ್ರಖರತೆಯಾಗಲಿ, ತೀವ್ರತೆಯಾಗಲಿ, ಇಲ್ಲಿ ಕಾಣಿಸದು. ಕಾವ್ಯ
ಕ್ಕಿಂತ ಕವಿಯ ವ್ಯಕ್ತಿತ್ವವು ಸಾಧಿಸಬಲ್ಲ ವಿಜಯವಿದು. ಪ್ರಸನ್ನತೆ, ಪ್ರಾಸಾದಿ
ಕತೆ ಇದರ ಗುಣ. ಇದು ಕುವೆಂಪು ಕಾವ್ಯದ ಗುಣವೂ ಆಹುದು, ಗೀತ
ನಾಟಕಕಾರರ ಕಾವ್ಯಗುಣವೂ ಅಹುದು.

ಈ ವಿಚಾರವನ್ನು ಇನ್ನಷ್ಟು ಸ್ಫುಟವಾಗಿ ಹೇಳಬೇಕಾದರೆ, ಅಂಬಿಕಾತನಯ ದತ್ತರ ಕಾವ್ಯದೊಂದಿಗೆ ಇದಕ್ಕಿದ್ದ ಹೋಲಿಕೆ ವೈಷಮ್ಯಗಳನ್ನು ಪರೀಕ್ಷಿಸಿ ನೋಡಬೇಕು. ಅಂಬಿಕಾತನಯರ ಕಾವ್ಯಕ್ರಿಯೆಯು ಪರಿಸರದ ಪ್ರಭುತ್ವವನ್ನು ಒಪ್ಪದೆ, ಅದನ್ನು ಸಮೂಲಾಗ್ರವಾಗಿ ಅತಿಮಾನವ ರೀತಿಯಲ್ಲಿ ನುಂಗಿ ನೀರು ಕುಡಿಯುತ್ತದೆ. ತದನಂತರ ಅದು ನಿರ್ಮಿಸುವ ಸೃಷ್ಟಿಯು ನವೋನವವಾಗಿರುತ್ತದೆ. ಕವಿಯು ಈ ಪ್ರತಿಸೃಷ್ಟಿಯು ತೀರ ಅಲೌಕಿಕವಾಗದಂತಿದ್ದು, ಅಲ್ಲಿ ಅತಿ ಪರಿಚಿತವಾದ ಆದರೂ ದೈವಿಕವಾದ ಸಂತಸದ ನಿಬ್ಬೆರಗೊಂದು ಮಾತ್ರ ವ್ಯಾಪಿಸಿರುತ್ತದೆ. ಈ ಕಾವ್ಯಕ್ರಿಯೆ ಅಸಾಮಾನ್ಯ ಪ್ರತಿಭೆಯ ಲಕ್ಷಣ. ಈ ಕಾವ್ಯದ ಗುಣವು ಇಂಥಹದೇ ಎಂದು ಬೊಟ್ಟುಮಾಡಿ ತೋರಿಸಿ, ವಿಮರ್ಶೆಯ ಒಂದು ವಿಶಿಷ್ಟ ಕೋಷ್ಟಕದಲ್ಲಿ ಸೆರೆಹಿಡಿಯುವದು ದುಸ್ಸಾಧ್ಯ.

ಇನ್ನು ಮೂರನೆಯ ಪ್ರಕಾರದ ಕಾವ್ಯಕ್ರಿಯೆಯು, ಪರಿಸರ-ವಿನಾಶದ ತಳಮಳಿಕೆಯಲ್ಲಿ, ಅಹಮಹಮಿಕೆಯಲ್ಲಿ ಕಾಲಕಳೆಯುತ್ತದೆ. ಬಹುಶಃ ಈ ರೀತಿಯ ಕಾವ್ಯಕ್ರಿಯೆ, ಶೆಲ್ಲಿ ಮತ್ತು ಸ್ವಿನ್‌ಬರ್ನರ ಕೆಲವೊಂದು ಕವನಗಳಲ್ಲಿ ಮಾತ್ರ ಕಂಡುಬರುವದು. ಕನ್ನಡ ಕಾವ್ಯದಲ್ಲಿ ಇಂಥ ಉದಾಹರಣೆಗಳು ಇರಬಹುದು, ಆದರೆ ಪ್ರಕೃತ ಲೇಖಕ ಅದರ ಬಗ್ಗೆ ಹೆಚ್ಚು ವಿಚಾರ ಮಾಡಿಲ್ಲ. ಈ ಕಾವ್ಯದ ಗುಣ ಹೆಚ್ಚಾಗಿ Fanciful ಆಗಿದ್ದು, ಕಣ್ಣಿಗೆ ನೋಡಲು ಮಾತ್ರ ಮೊದಲನೆಯ ಪ್ರಕಾರದ ಕಾವ್ಯಕ್ಕಿಂತಲೂ ವಿಶೇಷ ಪರಿಣಾಮಕಾರಿಯಾಗಿರುತ್ತದೆ. ಆದರೆ ಮೂಲದಲ್ಲಿ ಇದು ಜ್ವರಪೀಡಿತವಾದದ್ದು. ಇದಕ್ಕೆ, ಹವ್ಯಾಸ ಬಡಬಡಿಕೆ ಬಹಳ.

*   *   *

ವಿನಾಯಕರ ಜೀವನದಲ್ಲೊದಗಿದ ಅನೇಕ ಪಯಣಗಳು ಅವರ ಸಮನ್ವಯ ಜಿಜ್ಞಾಸೆಗೆ ಪೂರಕವಾಗಿ ಬಂದವು. ಯಾಕೆಂದರೆ ಈ ಪಯಣಗಳ ಫಲವಾಗಿ ಅವರು ವಿವಿಧ ಪರಿಸರಗಳನ್ನು ಮತ್ತು ಜನಾಂಗಗಳ ಸಂಸ್ಕೃತಿದರ್ಶನವನ್ನು ಕಂಡರು. ಇದರಿಂದ ಅವರ ಕಾವ್ಯ ವಿಶೇಷ ಸಮೃದ್ಧಿಯನ್ನು ಪಡೆಯಿತು. ಪರಿಸರ ಮತ್ತು ಸಂಸ್ಕೃತಿದರ್ಶನ — ಇವೆರಡೂ ವಿನಾಯಕಕಾವ್ಯದ ಸ್ಫೂರ್ತಿ-ಕೇಂದ್ರಗಳೆಂದು ಕರೆಯಬಹುದು. ಸಮುದ್ರಗೀತೆಗಳಿಗೆ, ಇಂಗ್ಲಂಡದ ಕಡಲು, ಅಲ್ಲಿಯ ಬೆಟ್ಟ, ದಿನ್ನೆಗಳು, ಕೊಟೆಗಳು, ಮಹಾಕವಿಗಳು ನೆಲೆಸಿದ ಹಳ್ಳಿಗಳು,

ಫ್ರಾನ್ಸದ ಉನ್ನತ ಕ್ರಿಸ್ತಾಲಯಂಗಳು, ಸ್ಫೂರ್ತಿಯನ್ನಿತ್ತವು. ಅವ
'ಉಗಮ'ಕ್ಕೆ ಕಾರಣವಾದುದು, ಮಹಾಬಳೇಶ್ವರದ ಬೆಟ್ಟ ಮತ್ತು ಕೃಷ್ಣಾತೀರ
ತರ್ಕತೀರ್ಥರ ಸುಸಂಸ್ಕೃತ ಬಾಳಿನ ತಿರುಳು. 'ಹಿಗ್ಗು' ವೀಸನಗರದ
ಇನ್ನೊಂದು ಸಂಸ್ಕೃತಿಯ ಹಿನ್ನೆಲೆಯಲ್ಲಿ ಅವರು ಪಡೆದ ಆಂತರಿಕ ಆನಂದ
'ಬಾಳದೇಗುಲದಲ್ಲಿ' ಎಂಬ ಬೃಹತ್ ಕಾವ್ಯವು, ಅವರ ಸುಸಂಸ್ಕೃತ ಮನಸ್
ಬಾಳನ್ನು ದೇಗುಲದ ಪವಿತ್ರ ಆವರಣದಲ್ಲಿ ಇರಿಸಿ, ಆದರ ವಿರಾಟ್‌ರೂಪ
ದರ್ಶನವನ್ನು ಪಡೆಯಲೆತ್ನಿಸಿದ ಸಾಹಸ.

ಈ ಪರಿಸರಪ್ರಜ್ಞೆಯೇ ಅವರ ಕಾವ್ಯಕ್ಕೆ ಒಂದು ಗಮ್ಯತರವಾ
(Elemental Quality) ಯನ್ನು ತಂದುಕೊಟ್ಟಿದೆ. ಯಾಕೆಂದರೆ ಈ
ಪ್ರಜ್ಞೆಯು ಅವರ ಕಣ್ಣೆದುರು ಅನಂತತೆಯ ದರ್ಶನವನ್ನೊದಗಿಸಿಕೊಡುತ್ತದೆ
ಕ್ಷಿತಿಜದವರೆಗಿನ ಸಮುದ್ರದ ವಿಸ್ತಾರವನ್ನು ನೋಡಿದಾಗ, ಬೆಟ್ಟದ ಎತ್ತರ
ಮೇಲಿಂದ ಕೆಳಗಿನ ದೃಶ್ಯವನ್ನು ಕಂಡಾಗ, ಪುರಾತನ ಮಂದಿರಗಳನ್ನು ಪ್ರವೇ
ಸಿದಾಗ, ದಯಾರ್ದ್ರಹೃದಯಿಗಳಾದ ಗೆಳೆಯರನ್ನಾಗಲೀ, ಮಹಾನುಭವರನ್ನಾ
ಗಲೀ ಸಂದರ್ಶಿದಾಗ – ಈ ಅನಂತತೆಯ ಪವಿತ್ರಪ್ರಜ್ಞೆ ಅವರಲ್ಲಿ ಜಾಗೃತವಾಗು
ತ್ತದೆ. ಈ ಪಾವಿತ್ರ್ಯವೇ ಕವಿ 'ಮ್ಯಾಥ್ಯು ಅರ್ನೊಲ್ಡ'ನ ಕಾವ್ಯದೃಷ್ಟಿಯನ್ನು
ರೂಪಿಸಿದಂತೆ ವಿನಾಯಕರ ವಿವಿಧ ದೃಷ್ಟಿಗಳನ್ನು ರೂಪಿಸುತ್ತದೆ. ಅನಾದಿಕಾಲ
ದಿಂದ ನಡೆದು ಬಂದ ಮನುಕುಲೇತಿಹಾಸದ ಸಮಗ್ರದರ್ಶನ, ಭವಿಷ್ಯತ್ತಿನಾಚೆ
ಕಣ್ಣು ಹರಿಸುವ ಅವರ ಆದರ್ಶವಾದಿಯ ದೃಷ್ಟಿ, ಮತ್ತು ಶಾಂತಿ, ತುಷ್ಟಿ
ಗಳನ್ನು ನೆಲೆಗೊಳಿಸುವದಕ್ಕಾಗಿ 'ಅಪೌರುಷೇಯ ಪೌರುಷ'ವನ್ನು ಹೊಂದ
ಲೆಳಿಸಬೇಕೆಂದು ಬಯಸುವ ಮನೋವೃತ್ತಿ—ಇವೆಲ್ಲಕ್ಕೂ ಆ ಅನಂತತೆಯ
ಪವಿತ್ರದರ್ಶನವೇ ಕೇಂದ್ರಬಿಂದುವಾಗಿದೆ.

" ಎತ್ತು ! ಅಭಯ ಕರವನ್ನೆತ್ತು !
ಚಕ್ರಪಾಣಿಯಾಗು !
ನೆಲದಲ್ಲಿ, ಜಲದಲ್ಲಿ,
ಗಾಳಿಯಲ್ಲಿ, ಆಕಾಶದಲ್ಲಿ
ಸಿರಿಗಡಲಿನೊಡಲಲ್ಲಿ,
ನೆಲದ ತಳಬುಡದಲ್ಲಿ,

ತಾರಾಮಂಡಲದ ಸಾವಿರ ವೀಥಿಗಳಲ್ಲಿ,—
ಎಲ್ಲೆಡೆಗೆ ನಡೆಯಲಿ ನಿನ್ನ ಯಂತ್ರ !
ಕೇಳಿಬರಲಿ ನಿನ್ನ ಮಂತ್ರ :—
ಅಗ್ನಿಯೇ, ಅಡುಮನೆಗೆ ನಡೆ !
ವರುಣನೇ, ಒಕ್ಕಲಿಗನಾಗು !
ವಾಯುವೇ, ಬಿಜ್ಜಣಿಗೆಯಾಗು !
ಕುಬೇರನೇ, ನಾಡಬೊಕ್ಕಸವಾಗು !
ಇಂದ್ರನೇ, ಕಲಾಕೇಂದ್ರವಾಗು !
ಬ್ರಹಸ್ಪತಿಯೇ, ಮಹಾಪ್ರಧಾನನಾಗು !"

ಅನಂತ-ತತ್ವದ ಪ್ರೇಮವು ಕವಿಯ ವ್ಯಕ್ತಿತ್ವವನ್ನು ತುಂಬಿ ನಿಂತು, ಅವನಿಗೆ ಅಮಿತ ಶಕ್ತಿಯನ್ನು ಕೊಡುತ್ತದೆ. ಅವನು ಸುತ್ತಲಿನ ಜೀವತತ್ವಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ, ದೈವಿಕಶಕ್ತಿಯ ಅಪರಾವತಾರವೆಂಬಂತೆ ಕಾಣಿಸಿಕೊಳ್ಳುತ್ತಾನೆ.

ಅವರ ಬಾಳಸೇಗುಲದಲ್ಲಿಯ ಕಲೋಪಾಸಕ, ಸಮಾಜಸುಧಾರಕ, ರೂಪಾರಾಧಕ, ಭಕ್ತ, ಜ್ಞಾನಿ, ಮುಕ್ತಜೀವಿ, — ಇವರೆಲ್ಲರೂ ಈ ಅನಂತ ತತ್ವದ ಪ್ರತೀಕಗಳಾಗಿ ಬರುತ್ತಾರೆ. ಕವಿಯ ಸುಸಂಸ್ಕೃತ ಮನಸ್ಸು ಅವರ ಸ್ತುತಿಗಾನದಲ್ಲಿಯೇ ತನ್ನ ಜೀವನದ ಅಮೃತತ್ವವನ್ನು ಪಡೆಯುತ್ತದೆ.

ಅಂತೂ ಪರಿಸರದ ಪಾವಿತ್ರ್ಯ, ಸುಸಂಸ್ಕೃತ ಬಾಳಿನ ದಿವ್ಯಪ್ರಭೆ, ಮಹಾಮಹಿಮರ ಪೂಜೆ, ಕಲಾರಾಧನೆ - ಇವೆಲ್ಲವುಗಳ ಸಮಗ್ರದರ್ಶನವೇ ವಿನಾಯಕ ಕಾವ್ಯ. ಅದಕ್ಕನುಗುಣವಾಗಿಯೇ ಅವರ ಕಾವ್ಯತಂತ್ರವಿದೆ.

ವಿನಾಯಕರ ಅನೇಕ ಬಿಡಿ ಕವಿತೆಗಳನ್ನು ಪರಿಶೀಲಿಸಿದಾಗ, ನಮ್ಮೆಲ್ಲರಿಗೆ ಒಂದು ವಿಷಯ ಹೊಳೆಯದಿರದು;— ಅದೆಂದರೆ, ಪ್ರತಿ ಕವಿತೆಯೂ ಓರ್ವ ವ್ಯಕ್ತಿಯಂತೆ ಸಜೀವವಾಗಿ ಒಳ್ಳೆಯ ಭದ್ರಾಕಾರದ ನಿಲುವಿನಿಂದ ಕೂಡಿದೆ. ಮೊದಲನೆಯ ಭಾಗದಲ್ಲಿ – ಶಿಶುಸಹಜವಾದ ಮುಗ್ಧ ಬೆರಗು ( Sense of wonder ) ಎರಡನೆಯ ಭಾಗದಲ್ಲಿ – ಕಾವ್ಯವಸ್ತುವಿಗೆ ಪೂರಕವಾದ ವಿಷಯಗಳ ಸುಂದರ ಜೋಡಣೆ, ಮತ್ತು ಕಾವೇರುತ್ತಿರುವ ಆದರ್ಶವಾದಿಯ ಕೆಚ್ಚು, ಮೂರನೆಯ ಭಾಗದಲ್ಲಿ, - ಪ್ರಪಂಚದ ಸಮಗ್ರ ದರ್ಶನವನ್ನು ಪಡೆದು, ಅಭಯವಾಣಿಯಲ್ಲಿ ಮಾತನಾಡುವ ಮಹಾಪುರುಷನ ಗಂಭೀರ ಮೊಳಗು. ವಿನಾಯಕರ ಅನೇಕ

ಕವಿತೆಗಳ ಮುಕ್ತಾಯ ಇಂಥ ಒಂದು ಅಪೌರುಷೇಯವಾದ ದಿವ್ಯಜ್ಞಾ ಧ್ವನಿಯಂತೆ ನಮ್ಮನ್ನು ಬೆರಗು ಪಡಿಸುವದು. ಇಲ್ಲಿ ಮಾತ್ರ ವಿನಾಯಕ "The God-gifted organ voice of Kannada poetry" ಮಾತು ಸರಿಯಾಗಿ ಒಪ್ಪುತ್ತದೆ.

ಶೈಲಿಯ ದೃಷ್ಟಿಯಿಂದ ವಿನಾಯಕರ ಕಾವ್ಯ ಕುವೆಂಪು ಕಾವ್ಯ ಶ್ರೀಮದ್ಗಾಂಭೀರ್ಯದ ಕಾವ್ಯ. ವಿಸ್ತೃತ ಧ್ವನಿಸೂಚನೆಯೊಂದಿಗೆ ಮಹೋನ್ನತ (Sublime) ವಾತಾವರಣವನ್ನು ಸೃಜಿಸಬಲ್ಲದು. ಅದರ ಸಮೃದ್ಧಿಯ ಪ್ರಸನ್ನತೆ; ಅದರ ಫಲ ಸಂತೃಪ್ತಮೌನ.

ಪ್ರಾಸದ ಸರಣಿ ವಿನಾಯಕರ ಕೈಯಲ್ಲಿಯ ಮಾಂತ್ರಿಕ ದಂಡದಂತೆ ಅದಕ್ಕಿದ್ದ ಚಮತ್ಕೃತಿಯ ರಸಾನುಭವ ಬಿಟ್ಟಿಲ್ಲ. ರೂಪಪರಿವರ್ತನಾಶ ಅದರ ಸಹಜ ಗುಣ.

:: ೨ ::

ಇದುವರೆಗೂ ಚರ್ಚಿಸಲಾದ ವಿನಾಯಕರ ಪ್ರಗತಿಶೀಲ ಕಾವ್ಯದ ಗಳೇ ಅವರ ನವ್ಯಕವಿತೆಗಳ ಅಂತಃಸತ್ವವಾಗಿವೆ. ನವ್ಯತೆಯಿಂದ ಎಷ್ಟ ಪಡೆಯಬೇಕೋ ಅಷ್ಟನ್ನು ಸ್ವೀಕರಿಸಿ ಅವು ಅವರ ಸಮನ್ವಯ ಸುಂದರ ಪ್ರತೀಕಗಳಾಗಿವೆ. ವಿಜ್ಞಾನಯುಗದ ಹೊಸ ಪರಿಸರಕ್ಕೆ ತ ಅವರ ನವ್ಯಕಾವ್ಯಸೃಷ್ಟಿ ಬೆಳೆದು ಬಂದಿದೆ. ವಿನಾಯಕರ ನವ್ಯಕಾವ್ಯ ವಿವೇಚಿಸುವಾಗ, ಯೇಟ್ಸ್‌ಕವಿಯ ಕಾವ್ಯದಲ್ಲಾದ ಮಾರ್ಪಾಟು ನಮ್ಮ ನೆ ಬರುತ್ತದೆ. ಹತ್ತೊಂಭತ್ತನೆಯ ಶತಮಾನದ ಕೊನೆಯ ದಶ ಪ್ರಿ-ರೆಫಲಾಯಿಟ್ (Pre-Raphaelite) ಪಂಥದ ಕವಿಗಳ ಪರಂಪರೆ ಕಾವ್ಯರಚನೆ ಮಾಡಿದ ಯೇಟ್ಸ್, ೧೯೧೨ರ ಸುಮಾರು ನವ್ಯಕಾವ್ಯಮಾಗ ಲಂಬಿಯಾಗುತ್ತಾನೆ. ಆದರೆ ಆತನ ನವ್ಯತೆಗೂ, ಈಲಿಯಟ್‌ನ ನವ್ಯ ಮಹದಂತರವುಂಟು. ಯೇಟ್ಸ್ ೧೯೩೯ರ ವರೆಗೆ ಕಾವ್ಯರಚನೆ ಮಾಡಿ ಈಲಿಯಟ್‌ನ 'Waste Land' (೧೯೨೨)ದ ನವ್ಯತೆ ಅಲ್ಲಿ ಕಂಡುಬ

ಯಾಕೆಂದರೆ ನವ್ಯತೆಯಲ್ಲಿಯೂ ಭಿನ್ನರೀತಿಗಳುಂಟು. ಯೇಟ್ಸ್ ಕವಿಯ ನವ್ಯತೆ ಈಲಿಯಟ್‌ನ ನವ್ಯತೆಗಿಂತ ಎಷ್ಟು ಭಿನ್ನವೋ ವಿನಾಯಕರ ನವ್ಯಕಾವ್ಯವಾದರೂ ಈಲಿಯಟನ ಪುರಸ್ಕರ್ತರಾದ ಶ್ರೀಮಾನ್ ಅಡಿಗರ ನವ್ಯಕಾವ್ಯಕ್ಕಿಂತ ಭಿನ್ನವಾದುದು. ಈಲಿಯಟ್‌ರ ನವ್ಯತೆಯನ್ನು ಅನುಸರಿಸುವದು ಯೇಟ್ಸರ ಕಾವ್ಯಪ್ರಕೃತಿಗಾಗಲಿ, ವಿನಾಯಕರ ಕಾವ್ಯಪ್ರಕೃತಿಗಾಗಲಿ ಸಲ್ಲದ ವಿಷಯ. ಹಾಗಾದಲ್ಲಿ, ಹುಟ್ಟಿನಿಂದ ಬೆಳೆಯುತ್ತ ಬಂದ ಅಂತರಂಗದ ಕಾವ್ಯಮೂಲ್ಯಗಳ ಅಧಃಪತನವೇ ಆಗಿ, ಕವಿಯು ಅಂಧಾನುಕರಣೆಯ ಕಲಂಕಕ್ಕೆ ಗುರಿಯಾಗುತ್ತಾನೆ. ಇದನ್ನು ಯಾವ ಕವಿಯೂ ಸಹಿಸಲಾರನು.

ಗಾಂಧೀಯುಗದ ಸ್ಫೂರ್ತಿದಾಯಕ ವಾತಾವರಣದಲ್ಲಿ ಸ್ಥಾಪಿಸಲ್ಪಟ್ಟ ಗೆಳೆಯರ ಗುಂಪಿನ ದತ್ತವಾಣಿಯ ಕಾವ್ಯವೇದಿಯಲ್ಲಿ ಕೃತಿರಚನೆ ಮಾಡಿದ ವಿನಾಯಕರು, ಇಂಗ್ಲಂಡದಿಂದ ತಿರುಗಿ ಬಂದ ಬಳಿಕ, ಪೇಜಾವರ ಸದಾಶಿವರಾಯರ ಸ್ಮೃತಿಗಾಗಿ 'ವರುಣ-ಕುಂಜ'ವನ್ನು ಸ್ಥಾಪಿಸಿದರು. ಈ 'ವರುಣಕುಂಜ'ದ ಗುಂಪೇ ಅವರ ಪ್ರಗತಿಶೀಲ ವಿಚಾರದ ಕಾವ್ಯವನ್ನು ಮುಂದುವರಿಸಿತು. ಒಂದು ದೃಷ್ಟಿಯಿಂದ ಈ ಗುಂಪಿನ ಕಾವ್ಯವೇ — ಆಧುನಿಕರನ್ನು ಮತ್ತು ನವ್ಯರನ್ನು ಕೂಡಿಸುವ ಸೇತುವೆಮಾರ್ಗದಂತೆ ಇದೆ. ವಿನಾಯಕರು, ಭಾರತೀಯ ಪರಂಪರೆ, ಮತ್ತು ಇಂಗ್ಲಂಡದ ವಾತಾವರಣದಿಂದ ತಮ್ಮಲ್ಲಿ ಸಹಜವಾಗಿ ಬಂದ ಆಂಗ್ಲವೈಚಾರಿಕ ಪರಂಪರೆ — ಇವೆರಡರ ಸಮನ್ವಯದೃಷ್ಟಿಯಿಂದ ಈ ಗುಂಪನ್ನು ರೂಪಿಸಿ, ಬರಲಿರುವ ನವ್ಯಕಾವ್ಯವಿಚಾರಕ್ಕೆ ಒಳ್ಳೆಯ ವಾತಾವರಣವನ್ನು ಕಲ್ಪಿಸಿಕೊಟ್ಟರು. ಈ ವರುಣಕುಂಜದಿಂದ ಹೊರಟ ಸಹಸ್ರದಳ ಕಮಲವೇ — ವಿನಾಯಕರ ಶಿಷ್ಯಗಣದಲ್ಲೊಬ್ಬರಾದ ಸುಬ್ಬಣ್ಣಾಚಾರ್ಯ ಎಕ್ಕುಂಡಿಯವರ ಅಮೋಘ ಕಾವ್ಯ. ಮತ್ತು ಕುಂಜದ ಎರಡನೆಯ ಭಿನ್ನರೀತಿಯ ಕಾವ್ಯವೇ ಆದಿನವ್ಯರ ಮಾರ್ಗದ ಶ್ರೀ. ವ್ಹಿ. ಜಿ. ಭಟ್ಟರ ಕಾವ್ಯ.

ಅಂತೂ ವಿನಾಯಕರ ಕಾವ್ಯದೃಷ್ಟಿ, ಇವೆರಡೂ ಪರಂಪರೆಗಳ ಮೇಲೆ ಗಾಢ ಪ್ರಭಾವ ಬೀರಿದೆ. ನವ್ಯಕಾವ್ಯದ ಮಾತು ಕೇಳಿಬರುವ ಮುನ್ನವೇ ವಿನಾಯಕರು ಇಂಥ ವಿಚಾರಗಳನ್ನು ಪೋಷಿಸಿದ ಹಿರಿಯ ಗುಂಪಿನ ಕವಿಗಳಲ್ಲಿ ಮೊದಲಿಗರಾಗಿದ್ದಾರೆ.

ಮೇಲೆ ಪ್ರಸ್ತಾಪಿಸಿದಂತೆ ಯೇಟ್ಸ್ ಕವಿಗಳಲ್ಲಾದ ಮಾರ್ಪಾಟು ವಿನಾಯಕ

ರಲ್ಲಿ ನವ್ಯ ಅವಸ್ಥಾಂತರದಲ್ಲಿಯೂ ಆಯಿತು. ೧೯೧೨ಕ್ಕೆ ಯೇಟ್ಸರ ಕಾ
ಮಾರ್ಗ ಬದಲಾದರೂ, ಅದರಲ್ಲಿ ಎಳ್ಳಷ್ಟೂ ಕೃತ್ರಿಮತೆ, ಅಂಧಾನುಕರಣೆ ಕಂ
ಬರದಿರುವದೇ ಆ ಕಾವ್ಯದ ಗುಣವಿಶೇಷ. ಯಾಕೆಂದರೆ ಇದಕ್ಕೆ ಯೇಟ್
ಸಮನ್ವಯಧೋರಣೆಯೇ ಕಾರಣವೆಂದು ತಿಳಿಯಬೇಕು. ಅವರ ನ
ಅವಸ್ಥಾಂತರವನ್ನು ನೋಡಿದಾಗ ಅದು ಪರಂಪರೆಯ ಮೂಲಪ್ರವೃತ್ತಿ
ಸಹಜ ಬೆಳವಣಿಗೆಯಂತೆ ಬಂದಿತೆಂದೂ, ನವ್ಯದರ ಒಪ್ಪವನ್ನು ಒಳ
ಸಮಂಜಸ ರೀತಿಯಲ್ಲಿ ಪಡೆಯಿತೆಂದೂ ಗೊತ್ತಾಗುವದು. ಈ ದ್ವಿತೀಯಾ
ದಲ್ಲಿ ಯೇಟ್ಸರು ಕವಿತೆಗಾಗಿ ಆಯ್ದುಕೊಂಡ ವಸ್ತುಗಳನ್ನು ನೋಡಿದ
( Leda and the Swan 1928; Tower 1928; Byzantium 193
Sailing to Byzantium 1937 ) ಪರಂಪರೆಯ ಗಾಢಪ್ರಭಾವ ಅ
ಮೇಲೆ ಎಷ್ಟಿದೆ ಎಂಬುದು ಗೊತ್ತಾಗದಿರದು. ಅವರ ಪೂರ್ವಾರ್ಧ ಕಾವ್
ಶಬ್ದಸೌಷ್ಟವ, ಅಲ್ಲಿಯ ಕಲ್ಪಕತೆ, ನವ್ಯದರ ತಂತ್ರದಲ್ಲಿ ( Techniqu
ಆವಿರ್ಭಾವ ಹೊಂದಿವೆ.

೧೯೩೦ರಲ್ಲಿ ಬರೆದ Byzantium ಎಂಬ ಕವಿತೆಯಲ್ಲಿ ಪೂರ್ವ ಸಂ
ದಾಯ ಕಾವ್ಯದ ಶಬ್ದವೈಖರಿ, ಮಧ್ಯಯುಗದ ಚಕ್ರವರ್ತಿಗಳ ವರ್ಣರಂ
ಥಾಟಿನ ಸ್ಮೃತಿ ಯೇಟ್ಸರನ್ನು ಬಿಡಲಿಲ್ಲ. ಅಲ್ಲಿ ಬರುವ ತಾತ್ವಿಕ ವಿಚಾ
ನಿರೂಪಣಾಪದ್ಧತಿ ಸಂಪ್ರದಾಯಬದ್ಧವಾಗಿದೆ. ಅವರು ೧೯೧೯ರಲ್ಲಿ ' ನ
ಮಗಳಿಗಾಗಿ ಒಂದು ಪ್ರಾರ್ಥನೆ ' ಎಂಬ ಕವಿತೆಯಲ್ಲಿ, ದುರಭಿಮಾನ ಮ
ದ್ವೇಷಗಳು ಬೀದಿಯಂಗಡಿಯ ವಸ್ತುಗಳೆಂದೂ, ಪರಂಪರಾಗತವಾಗಿ ಬ
ಸಂಪ್ರದಾಯಗಳ ಪದ್ಧತಿಗಳು ಮತ್ತು ಸಮಾರಂಭದ ವಿಧಿನಿಯಮಗಳು ತ
ಮಗಳ ಮುಗ್ಧ ಸೌಂದರ್ಯಕ್ಕೆ ಪೋಷಕಗಳಾಗಿವೆ ಎಂದು ಹೇಳುತ್ತಾರೆ.

" How but in custom and in ceremony
Are innocence and beauty born ?"

ಇಲ್ಲಿ ಹೇಳುವ ನಿರೂಪಣಾ ಪದ್ಧತಿಯ ಸಂಪ್ರದಾಯಕತೆಯನ್ನೂ ನೋಡಬಹ
ಈಲಿಯಟ್-ಸಂಪ್ರದಾಯದ ನಮ್ಮ ನವ್ಯರಿಗೆ ಈ ಮಾತು ಅಗಾಧವಾಗಿ ಕಾ
ಬಹುದು. ಸ್ವತಃ ಕಣ್ವರು ಶಿಶುವಾದ ಶಕುಂತಲೆಯು ಋಷ್ಯಾಶ್ರಮದಲ್ಲಿ ಬ
ಯುತ್ತಿರುವಾಗ ಈ ರೀತಿ ಬಗೆದರೋ ಅನ್ನುವಷ್ಟು ಈ ಮಾತು ಸಂಪ್ರದಾ

ವಂತರ ಮಾತಾಗಿದೆ. ಈ ದಿಶೆಯಲ್ಲಿಯೇ ನಾವು ವಿನಾಯಕರ ನವ್ಯಕಾವ್ಯವನ್ನು ಪರಿಶೀಲಿಸಬೇಕು. ಅವರ ಪೂರ್ವದ ಪ್ರವೃತ್ತಿಗಳು, 'ವಾಗರ್ಥಪ್ರತಿಪತ್ತಿ'ಯು, ನವ್ಯಕಾವ್ಯದಲ್ಲಿ, ಹೊಸದರ ದರ್ಶನದಿಂದ ಕಳೆ ಪಡೆದುದು ಗೊತ್ತಾಗುವದು. ಅವರ 'ಬಾಳಗೇಗುಲದಲ್ಲಿ' ತಂದೆಯು ತನ್ನ ಮಗಳಿಗಾಗಿ ಅನ್ನುವ ಮಾತು ಯೇಟ್ಸರ ಮನೋಭೂಮಿಕೆಯ ಮಾತಿನಂತೆಯೇ ಇದೆ.

"ದೇವಪೂಜೆಯಲೆಂದು ತೇದ ಗಂಧದಕೊರಡು
ನಿನ್ನ ಕಾಪಿಡಲು ಸವೆಸಿದ್ದ ದೇಹ.
ನಿನ್ನ ಬೆಳಿಸಲು ಮುಂದೆ ಸಣ್ಣಗಾಗುವ ಜೀವ
ದಿವ್ಯನಂದಾದೀಪಕೆರೆದ ನೇಹ.
ಯಾವ ಋಣದಲಿ ನಾವು ನಿನ್ನನಿಡಬಯಸಿಲ್ಲ.
ನೀನು ಬೆಳುವುದೆ ನಮ್ಮ ಕಣ್ಣು ಪ್ರೀತಿ.
ನಿನ್ನ ಪಕ್ಕವು ಬಲಿತು ಹಾರಲಣಿಗೊಂಡಾಗ
ನಿನ್ನ ಹಾರಿಕೆ ನಿನಗೆ, ನಿನ್ನ ರೀತಿ."

ಯೇಟ್ಸ ಮತ್ತು ವಿನಾಯಕರಲ್ಲಿಯ ಹೋಲಿಕೆಯನ್ನು ಹೇಳಿದಾಕ್ಷಣವೇ ಈರ್ವರ ಕಾವ್ಯಗಳಲ್ಲಿ ತದ್ವತ್ ಸಾಮ್ಯರೂಪವನ್ನು (Exact Congruency) ಯಾರೂ ಅರಸಕೂಡದು. (ವಿನಾಯಕರ ನವ್ಯಕಾವ್ಯದ ಬಗ್ಗೆ ಹೆಚ್ಚು ತಿಳುವಳಿಕೆ ಮಾಡಿಕೊಳ್ಳಲು ಈ ಸಾಮ್ಯವನ್ನು ಕೊಡಲಾಗಿದೇ ವಿನಹ ಬೇರಾವ ಕಾರಣಕ್ಕಾಗಿಯೂ ಅಲ್ಲ) ಯಾಕೆಂದರೆ ಅವರೀರ್ವರೂ ಬೆಳೆದ ದೇಶ, ಅವರೀರ್ವರ ಹಿಂದೆ ಇದ್ದ ಪರಂಪರೆಯ ಕಾವ್ಯೇತಿಹಾಸ, ಅವರವರ ಪ್ರಾಂತಗಳಿಗಿದ್ದ ಸಂಸ್ಕೃತಿ – ಇವೆಲ್ಲವೂ ಭಿನ್ನವಾಗಿವೆ. ಆದರೆ ಅವರಿರ್ವರಿಗೂ ಇದ್ದ ಮನಸ್ಸಿನ ಓಘದಲ್ಲಿ ಮಾತ್ರ ಸಾಮ್ಯವಿದೆ. ತಮ್ಮ ತಮ್ಮ ವಿಶಿಷ್ಟ ಪರಂಪರೆಗಳ ಸತ್ವ, ಮತ್ತು ಜನ್ಮದಾರಭ್ಯ ತಮತಮಗೆ ದೊರೆತ ಸನಾತನ-ಪರಿಸರ-ವಿಶೇಷ – ಇವೆರಡರ ಸತ್ವ ಹೀರಿಕೊಂಡು ಬೆಳೆದ ಅವರೀರ್ವರುಗಳ ಪ್ರಗತಿಪಥದ, ನವ್ಯಮನೋಭೂಮಿಕೆಯನ್ನು ಮಾತ್ರ ನಾವು ನೋಡಬೇಕು.

ಈ ವಿಷಯದಲ್ಲಿ ಪ್ರಚಲಿತವಿದ್ದ ಇಂದಿನ ನವ್ಯ ಮನೋಭೂಮಿಕೆಯನ್ನು ನೋಡಬೇಕಾದರೆ, ಶ್ರೀ. ವ್ಹಿ. ಜಿ. ಭಟ್ಟರ 'ಕಾವ್ಯವೇದನೆ'ಯಲ್ಲಿಯ 'ಮಗಳೆನ್ನು ಗಂಡನ ಮನೆಗೆ ಕಳಿಸುವಾಗ' ಎಂಬ ಕವಿತೆಯನ್ನು ಓದಬೇಕು. ಸಾಲಂ

ಕೃತಳಾಗಿ ತನ್ನ ಪತಿಯೊಡನೆ ಮಗಳು ಬಂದು ಆಶೀರ್ವಾದಕ್ಕಾಗಿ ತಂದೆ
ನಮಸ್ಕರಿಸಿದಾಗ, ತಂದೆಯು ಕೊಡುವ ಉತ್ತರ ನಮ್ಮ ನವ್ಯರ ಮನೋಭಾ
ವನ್ನು ವ್ಯಕ್ತಪಡಿಸುವದು. ಮಗಳು 'ಹೋಗಿಬರುವೆನು ತಂದೆಯೇ' ಎಂ
ಹೇಳಿದರೆ, ತಂದೆಯು 'ಹೋಗಿ ಬಾ ನನ್ನ ಕರುವೆ' ಎಂದು ಉತ್ತರಿಸುತ್ತಾನೆ
ವಿನಾಯಕರಿಂದ ಇಂಥ ನವ್ಯತೆಯನ್ನು ನಿರೀಕ್ಷಿಸುವದು ಅಕ್ಷಮ್ಯ ಅಪರಾ
ವಾದೀತು. ತೆರೆದ ಅಂಗಡಿಯ ಮಾಲು, ಅವ್ಯಕ್ತ, ಸುವ್ಯಕ್ತಗಳ ಭೂಮಿತಿಯ
ವಿವಿಧ ರೂಪುಗಳು, ಕೀತು ಬಾತಿರುವ ಎದೆ, ಬಲಿತ ತೊಡೆ — ಇವು ತಮ
ಸೊತ್ತೆಂದು ಅತಿವಾಸ್ತವವಾದಿಗಳಾಗುತ್ತ ನಡೆದ ನವ್ಯರು ಬೊಬ್ಬಿರಿದು ಕೂಗಿದ
ಮೌನವೇ ಅದಕ್ಕೆ ಸಮರ್ಪಕ ಉತ್ತರ. ವಾಸ್ತವವಾದದ ಹೆಸರಿನಲ್ಲಿ, ಇಂ
ದಕ್ಕೆ ನವ್ಯವೆಂದು ಕರೆಯುತ್ತಿದ್ದರೆ, ವಿನಾಯಕರ ಕಾವ್ಯಮಾರ್ಗ ಸರ್ವಥಾ
ನವ್ಯವಲ್ಲ. ಈ ಮಾರ್ಗ ನವ್ಯರ ಗುರುವಾದ, ಮಹಾಕವಿ ಈಲಿಯಟ್‌ರ ನವ
ಮಾರ್ಗವೂ ಕೂಡಾ ಅಲ್ಲ. ಆದರೆ ಈ ನವ್ಯರ ಸೌಂದರ್ಯಸ್ಥಾನವೇ ಬೇ
ಇದೆ. ಅದು ಸದಾಶಿವರಾಯರ ಕವನಕ್ಕಿರುವ ಸೌಂದರ್ಯದ ನವ್ಯತೆ. ಅದನ
ವಿನಾಯಕರು ಗುರುತಿಸದೆ ಇಲ್ಲ. ಅಂಥದನ್ನು ಗುರುತಿಸಿಯೂ, ತಮ್ಮ ಮೂ
ಪ್ರಕೃತಿ ಮತ್ತು ವೈಚಾರಿಕಪರಂಪರೆ ಇವುಗಳಿಗೆ ಒಪ್ಪಿತವಾಗುವ ರೀತಿಯ
ನವ್ಯತೆಯನ್ನು ಸ್ವೀಕರಿಸಿ ಅಂಧಾನುಕರಣೆಯ ಕವಿಗಳಿಗೆ ತಮ್ಮ ಕೃತಿಯಿಂದಲ
ಮೌನದ ಎಚ್ಚರಿಕೆ ಕೊಟ್ಟಿದ್ದಾರೆ.

ಸದ್ಯ ವಿನಾಯಕರ ನವ್ಯಕಾವ್ಯ ಮತ್ತು ಅದರ ಮೂಲವನ್ನು ವಿವೇಚಿಸಿ
ಈಲಿಯಟ್‌ರಿಂದ ಸ್ಫೂರ್ತಿ ಹೊಂದಿದ ನಮ್ಮ ನವ್ಯರ ಧಾಟಿಯನ್ನು ತಿಳಿದ
ಕೊಳ್ಳುವದು ಅಗತ್ಯ. ಹಾಗಾದಲ್ಲಿ ವಿನಾಯಕರ ನವ್ಯಕಾವ್ಯಮಾರ್ಗದ ಗೊತ್ತು
ಗುರಿಗಳಾವುವೆಂಬುದು ತಿಳಿಯಲು ಸಾಧ್ಯವಾಗುವದು.

:: ೩ ::

ಆಧುನಿಕರ ನಂತರ ೧೯೪೩ರ ಸುಮಾರು ನಮ್ಮ ಸಾಹಿತ್ಯದಲ್ಲಿ ಪ್ರಗತಿಶೀಲರ ಕೂಗು ಕೇಳಹತ್ತಿತು. ಇವರಿಗೆ ಮೂಲಸ್ಫೂರ್ತಿ ಬಂದುದು ರಶಿಯನ್‌ರ ಮಾರ್ಕ್ಸವಾದದಿಂದ. ಆಗ ಒದಗಿದ ಬಂಗಾಲ ವಿಜಾಪುರ ಮತ್ತು ಕೋಲಾರಗಳಲ್ಲಿಯ ಬರಗಾಲವೂ ಅವರ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿತು. ಅದರ ಫಲವಾಗಿ ಸಾಹಿತ್ಯದ ಮುಖವು ವಾಸ್ತವವಾದದ ಕಡೆಗೆ ತಿರುಗಿತು. ಸರ್ವಶ್ರೀ ಅ. ನ. ಕೃಷ್ಣರಾಯರು, ಕುಳಕುಂದ ಶಿವರಾಯರು, ಬಸವರಾಜ ಕಟ್ಟೀಮನಿ - ಇವರೆಲ್ಲ ಈ ವಾದದ ಆದಿಪ್ರವರ್ತಕರಾದರು. ಇವರೆಲ್ಲರೂ ಕಾದಂಬರಿಕಾರರೇ ಆದುದರಿಂದ, ಪ್ರಗತಿಶೀಲವಾದವು ಕಾದಂಬರಿಯ ಕ್ಷೇತ್ರವನ್ನಷ್ಟೇ ವ್ಯಾಪಿಸಿತು. ಪರಂಪರೆಯ ಗಾಢ ಪ್ರಭಾವವುಳ್ಳ ಹಿರಿಯ ತಲೆಮಾರಿನ ಕವಿಗಳು ಇದರ ಬಗ್ಗೆ ಅಷ್ಟು ವಿಶೇಷ ಆಸ್ಥೆ ವಹಿಸಲಿಲ್ಲ. ಇಂಥ ಸಮಯದಲ್ಲಿ ವಿನಾಯಕರೇ ಮುಂದೆ ಬಂದು ಜೀಸಸ್ ಕರುಣೆಯಿಂದ ಪ್ರಗತಿಶೀಲರನ್ನು ಅಪ್ಪಿಕೊಂಡು, ಆ ವಾದದ ಒಳ್ಳೆಯ ಗುಣವನ್ನು ಮಾನ್ಯಮಾಡಿ ಅದಕ್ಕೆ ಸೂತ್ರಬದ್ಧವಾದ ಒಂದು ಸಿದ್ಧಾಂತವನ್ನು ಕಲ್ಪಿಸಿಕೊಟ್ಟರು. (೧೯೪೪ರಲ್ಲಿ ರಾಣೆಬೆನ್ನೂರಲ್ಲಿ ಜಿಲ್ಹಾ ಸಾಹಿತ್ಯ ಸಮ್ಮೇಲನದಲ್ಲಿ ಮಾಡಿದ ಭಾಷಣ.) ಹೀಗೆ ಆಸ್ಥೆವಹಿಸಿ ಮುಂದೆ ಬಂದ ಹಿರಿಯರಲ್ಲಿ ವಿನಾಯಕರೇ ಮೊದಲಿಗರು. ಅಂದಿನಿಂದ ಪ್ರಗತಿಶೀಲ ಧೋರಣೆಯು ಕಾವ್ಯದಲ್ಲಿ ಹರಿಯಹತ್ತಿ ನವ್ಯಕಾವ್ಯನಿರ್ಮಿತಿಗೆ ವಾತಾವರಣವನ್ನು ತಿಳಿಮಾಡಿತು. ಹತ್ತೊಂಬತ್ತನೂರಾ ಐವತ್ತಕ್ಕೆ ಸ್ವತಃ ಅವರದೇ 'ನವ್ಯಕವಿತೆಗಳು' ಎಂಬ ಕವನಸಂಗ್ರಹ ಪ್ರಕಟವಾಯಿತು.

ಇಲ್ಲಿ ಅವರ ಮೂಲಕಾವ್ಯಪ್ರವೃತ್ತಿಗಳೇ ಹೊಸ ಪರಿಸರದ ಅನುಭವದಿಂದ ನವ್ಯತೆಯನ್ನು ತಳೆದವು. ಅನಂತ-ತತ್ವದ ಪ್ರಜ್ಞೆಯು ಇಲ್ಲಿಯೂ ಹೊರಹೊಮ್ಮಿದೆ. ಕವಿಯು ಅನಂತದೆದುರಿನ ಕೈಗೂಸಾದ ಕಾಲನನ್ನು ಸಂದರ್ಶಿಸುವ ಸಂದರ್ಭವೊಂದು ಇಲ್ಲಿ ಒದಗಿಬರುತ್ತದೆ. ಆದರೆ ಈಗ ಆತನು ಕಾಲನನ್ನು ಕಾಣುವದು ಹೊಸ ಪಸರಿಸರದಲ್ಲಿ- ಜಗತ್ತಿನ ಹೋಟಲೊಂದರಲ್ಲಿ ಆವನನ್ನು ಕಾಣುತ್ತಾನೆ. ಅಲ್ಲಿ ಎಲ್ಲರೂ ಅಂದರೆ ಶುಕ್ರರು, ವಕ್ರರು, ಸಂತರು ನೆರೆದು - "ದೈವದಾಟದಲ್ಲಿ ತಮ್ಮ ಪಾಲಿಗಿರುವ ಎಲೆ"ಯನ್ನು ಕಂಡುಕೊಳ್ಳುವದರಲ್ಲಿದ್ದಾ

ರೆಂದು ಕವಿಯು ವರ್ಣಿಸುತ್ತಾನೆ.

ಇನ್ನೊಂದು ಸಂದರ್ಭದಲ್ಲಿ ಸನಾತನಿಗಳ ಡಾಂಭಿಕವೃತ್ತಿ ಕವಿಯ ಮ
ಸ್ಸನ್ನು ನೋಯಿಸುತ್ತದೆ. ಗುರುವಾರ ಗುರುಭಜನೆ, ಶುಕ್ರವಾರಕೆ ಪೂ
ಶನಿವಾರ ಬಂದಿವಾಸಕ್ಕೆ ಹೋಗುವ ಮನುಷ್ಯನನ್ನು ಕಂಡು "ಧರ್ಮದೊಡಲ
ವ್ಯಾಪಿಸಿತ್ತು ಮೋಸ" ಎಂದು ಕವಿ ಉದ್ಗಾರ ತೆಗೆಯುತ್ತಾನೆ.

ವಿನಾಯಕ-ಕಾವ್ಯದ ಮುಖ್ಯ ಲಕ್ಷಣಗಳಲ್ಲೊಂದಾದ ಮನುಕುಲೇತಿ
ಸದ ಪ್ರಜ್ಞೆಯು 'ಹಲವಳಿ' ಎಂಬ ಕವನದಲ್ಲಿ ಹೊಸ ರೂಪಕದ ಮುಖಾಂ
ತಲೆಯೆತ್ತಿದ್ದನ್ನು ನೋಡಬಹುದು. ವಿಜ್ಞಾನದ ವಿವಿಧ ಶೋಧಗಳು, ಯು
ನಿಯಂ, ರೇಡಿಯಂ ಧಾತುಗಳು ಮನುಷ್ಯನಿಗೆ ಅಪಕಾರಿಗಳೂ ಅಹುದು, ಉ
ಕಾರಿಗಳೂ ಅಹುದು. ಅವುಗಳಿಂದ ಅಣುಬಾಂಬನ್ನು ಹುಟ್ಟಿಸಬಹುದು, ಮತ್ತೊ
ಅವುಗಳಿಂದ ಪ್ರಕೃತಿಯಲ್ಲಿ ಇನ್ನಷ್ಟು ಚೆಲುವನ್ನು ಮೂಡಿಸಬಹುದು. ಆ
ಎಂಥ ಸೃಷ್ಟಿ ಇವುಗಳಿಂದ ಹೊರಬರುವದೋ ಎಂದು ಕವಿಯು ಚಿಂತಾಕ್ರಾ
ನಾಗಿ ಜನತೆಯನ್ನು ಪ್ರಶ್ನಿಸಿದಾಗ, ಒಬ್ಬನು ಹಿಟ್ಲರನೇ ಪುನಃ ಬರುವನೆಂದ
ಇನ್ನೊಬ್ಬನು ಸ್ಟಾಲಿನ್ ಮಾವೋಗಳ ಅವತಾರವಾಗಲಿದೆ ಎಂದೂ ಉತ್ತರಿ
ತ್ತಾನೆ. ಅಂತೂ ಯಾವ ಉತ್ತರವೂ ಅವನ ಚಿಂತೆಯನ್ನು ಪರಿಹರಿಸದು. ಭೂ
ತಾಯಿಯ ಕರುಣಾಜನಕ ಸ್ಥಿತಿ ಅವನ ಕರುಳು ಕೊರೆಯುತ್ತದೆ :

> ''ಹಲಿಯುಳಿಯುವ ಬಾಣಂತಿಯಂತೆ ಹಲವಳಿದು
> ಭೂಮಿತಾಯಿ ಹಾಸಿಗೆ ಹಿಡಿದಿದ್ದಾಳೆ.
> ಒಂದೊಂದು ನಾಗರಿಕತೆಯ ಯುಗ
> ಒಂದೊಂದು ಗರ್ಭಧಾರಣ
> ಆದರೆ ಜನ್ಮವಾಗುವ ಮೊದಲೆ ಗರ್ಭಸ್ರಾವ !''

ಯಾವ ಯುಗವೂ — ಹಿಟ್ಲರನ ಯುಗವಾಗಲಿ, ಸ್ಟಾಲಿನ್ ಯುಗವಾಗಲಿ,—
ಲೋಕಕ್ಕೆ ಪೂರ್ಣನಾಗರಿಕತೆಯ ದೀಕ್ಷೆಯನ್ನು ಕೊಡಲಸಮರ್ಥವಾಯಿತೆಂ
ಕವಿ ಯೋಚನಾಮಗ್ನನಾಗುತ್ತಾನೆ:—

> " ಅಕಾಲ ಪಿಂಡವು ಒಮ್ಮೆ ಅಸ್ಪೃಷ್ಟ ಸಂತತಿ,
> ಒಮ್ಮೆ ರಾಕ್ಷಸ,
> ಒಮ್ಮೆ ಕಣ್ಣು ನಡುನೆತ್ತಿಗೇರಿದ ಪಿಶಾಚಿ "

ಹಾಗಾದರೆ ಸದ್ಯದ ವಿಕೃತಿ ಮತ್ತು ದುಃಖ ಮುಂದಿನ ಸುಖಕ್ಕಾಗಿ ಅಲ್ಲವೆ? ಎಂದು ಕವಿಯು ತನ್ನ ದುಃಖವನ್ನು ಮರೆಯುತ್ತಾನೆ.

> "ಯಾವ ಸನತ್ಕುಮಾರನ ಜನ್ಮ ಬಯಸಿ
> ಭೂದೇವಿ ಹೀಗೆ ಬೇನೆ ತಿನ್ನುವಳು?
> ಯಾವ ಅದೊಂದು ಉಳಿಯುವದೆಂದು
> ಹೀಗೆ ಹಲವಳಿಯಲು ಹಿಂದೆ ಮುಂದೆ ನೋಡಳು?"

ಭೂಮಿತಾಯಿಯು ಹಲಿಯುಳಿಯುವ ಬಾಣಂತಿ ಎಂಬ ವಿಚಾರದಲ್ಲಿ ಮತ್ತು ಸನತ್ಕುಮಾರನ ಜನ್ಮ ಮುಂದಾಗಲಿದೆ ಎಂದು ಹೇಳುವದರಲ್ಲಿಯೆ ವಿನಾಯಕರ ನವ್ಯತೆಯ ಸೂಕ್ಷ್ಮ ಪ್ರಕಾರವನ್ನು ನಾವು ಗುರುತಿಸಬಹುದು.

ಅವರ 'ಮಧ್ಯಾಹ್ನ'ವೆಂಬ ಕವನವು ನವ್ಯರ ಅನಾಥಪ್ರಜ್ಞೆಯ ಪ್ರಚಂಡ ತಾಂಡವದ ಮನೋಭಾವದ ಹಿನ್ನೆಲೆಯಲ್ಲಿ, ಉಜ್ಜಿ, ತಿಕ್ಕಿದ ಹೊಳಪುಳ್ಳ ಶಬ್ದಗಳ ಸಂವಿಧಾನದ ಕಟ್ಟಿನಿಂದ ಝಳಪಿಸುತ್ತ ಬೀಸುತ್ತಿರುವ ವೀರನ ಖಡ್ಗದಂತೆ ಕಣ್ಣು ಕುಕ್ಕಿಸುತ್ತದೆ.

> "ಹಿಟ್ಲರನು ಮೂಲ ಪುರುಷ ಚಂಡಭಾಸ್ಕರ
> ನಿರ್ಮಿಸಿದ ನಿರ್ದಯಲ ಸೆರೆಮನೆಯು ನೋಡಾ!
> ಬೆಮರಿದೆ ಕಲ್ಲು
> ಕಮರಿದೆ ಬಾಳಿ
> ಭ್ರಮರವೂ
> ಮಲಗಿದೆ ದಾಡಿಮದ ಹೂವಿನಲ್ಲಿ.
> ಸೋರುತಿದೆ ಮೈ.
> ಹಾರುತಿದೆ ಪ್ರಾಣ
> ಅರೆಮುಚ್ಚಿವೆ ಕಣ್ಣು.
> ನೀಲಿಮದ ಇಂದ್ರನೀಲದಲ್ಲಿ
> ಅಸಹ್ಯ, ಅಸಾಧ್ಯ ಬಿಳಿ ಬೆಳಕಿನ
> ಕಠಾರಿ ಇರಿದ ನಂಜು ಪಸರಿಸಿದೆ.
> ಹಳೆಯ ರಣಹದ್ದೊಂದು
> ವರ್ತುಲಾಕಾರವಾಗಿ
> ಯಮ ತೋರಿಸಿದ ಕರಿನಿಶಾನೆಯಂತೆ
> ಓಲಾಡುತಿದೆ."

ಸ್ವಯಂಪ್ರಭೆಯುಳ್ಳ ಪ್ರತಿಶಬ್ದವೂ ತನ್ನ ತನ್ನ ಬೆಳಕನ್ನು ಇನ್ನೊಂದು
ಮೇಲೆ ಪ್ರತಿಫಲಿಸಿ, ಇಡೀ ಕವಿತೆಯು ಒಂದು ಬೆಳಕಿನ ಪುಂಜದಂತೆ ಕಾಣ
ಬೇಕು ಎಂಬ ಮಾತು ಈ ಕವಿತೆಗೆ ಸರಿಯಾಗಿ ಒಪ್ಪುತ್ತದೆ. 'ಬಿಳಿ ಬೆ
ಕಠಾರಿ ಇರಿದ ನಂಜು ಪಸರಿಸಿದೆ' ಎಂಬ ಪದಸರಣಿ ಪ್ರತೀಕವಾದದ ಅತ್
ಮಟ್ಟದ ಕಾವ್ಯದ ಧಾಟಿಯಲ್ಲಿದೆ.

ಅವರ 'ದುಃಸ್ವಪ್ನ'ವು ಜೀವನದ ಅಗವ್ಯದೌರಾತ್ಮ್ಯದ ಬಗ್ಗೆ ಚೀರಿ
ಸುಕುಮಾರ ಆತ್ಮದ ಕರುಣಾಜನಕ ಕೂಗಾಗಿದೆ.

ಸ್ವಭಾವತಃ ವಿಷಮಪ್ರಕೃತಿಯ ಪ್ರತಿಮೆಗಳ ಜೋಣೆಯಿಂದ ಕವಿ
ಸ್ನಾಯುರಚನೆಯಲ್ಲಿ ಒಂದು ವಿಶೇಷ ತರಹದ ಬಿಗುವನ್ನು (Tension) ತ
ವಿನಾಯಕರ ನವ್ಯಕಾವ್ಯತಂತ್ರ ಪ್ರಶಂಸನೀಯವಾದುದು.

"ಓ ವಜ್ರಸಮ ವ್ಯಕ್ತಿತ್ವವೇ !
ಗಾಂಧಾರಿದೃಷ್ಟಿಯಾಡದ ಚಿತ್ತದ್ರವ್ಯ
ನಿನ್ನ ಮುಖ್ಯಪ್ರಾಣದಲ್ಲಿಯೇ ಸಿಂಹಾಸನಸ್ಥವಾಗಿದೆ.
ಓ ವನಸ್ಪತಿರಾಜ ಚಂದ್ರ !
ನಿನ್ನ ಮಂಜುಬೆಟ್ಟಗಳ ಮೇಲೆ
ನಿಗಿನಿಗಿ ಕೆಂಡಗಳ ಕುಂಡದಲ್ಲಿ ಬಿದ್ದು
ಮೊಲವೊಂದು ಸಾಯುತ್ತಿದೆ.
ಬೆಂಚುಗಲ್ಲಿನ ಪರ್ವತದ ಹೊದರಿನಲ್ಲಿ
ಮೇಣದ ಗವಿಯೊಂದಿದೆ
ಥಾಲಿನಂತಹ ಭದ್ರಾಕಾರದಲ್ಲಿ
ಹೌಹಾರಿದ ಸಣ್ಣಿಲಿಯೊಂದು ಮನೆಮಾಡಿಕೊಂಡಿದೆ."

ನವ್ಯವಾದ ಮತ್ತು ಸಜೀವ ರೂಪಕಗಳನ್ನು (Myths) ಸೃಷ್ಟಿಸುವ ವಿನಾ
ಕರ ಕುಶಲತೆ ಮೇಲೆ ಕಂಡಂತೆ ಕವನದ ಎರಡನೆಯ ಭಾಗದಲ್ಲಿಯೂ ಕಾ
ವದು. ಅಲ್ಲಿ ಹಬ್ಬಿದ ನೀರವ ಭೀಕರತೆಯನ್ನು ಸ್ಪರ್ಶದಿಂದ ತಿಳಿಯಬಹುದ
ವಷ್ಟು ಭೀಕರತೆಯ ಸ್ಪಂದನವಿದೆ:—

"ಅವ್ಯಕ್ತ ಅಂತರಬೆಂತರವೇ
ಮೂರ್ತಿಯಾದ ಈ ಗುಡಿಯಲ್ಲಿ

ಕತ್ತಲೆಯ ನಂದಾದೀಪ
ಅಳ್ಳೆದೆಯ ತೈಲವನ್ನು ಸುಡುತ್ತಿದೆ.
ನೆನಪಿನ ಹೂಬತ್ತಿ
ಪ್ರಾಣಪಣತಿಯಲ್ಲಿ
ಹಾವಿನಂತೆ ಬಿದ್ದುಕೊಂಡಿದೆ."

ಕವನದ ಕೊನೆಯ ಭಾಗದಲ್ಲಿ ಗಾಂಧಾರಿಯ ಉಪಮೆಯಿಂದ ವಿವೇಕವನ್ನು ಸಂಬೋಧಿಸಿ ಜೀವನವನ್ನು ಉದ್ಧರಿಸಲು ಕೇಳಿಕೊಳ್ಳುತ್ತಾರೆ. ವಿನಾಯಕರ ಪ್ರತಿ ಕವನದ ಮುಕ್ತಾಯದ ಮೊಳಗನ್ನು ನಾವು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಅವರ 'ಶೂನ್ಯ'ವು ಯುದ್ಧದಿಂದ ಒದಗಬಹುದಾದ ಪ್ರಳಯದ ಚಿತ್ರವೊಂದನ್ನು ಕೊಟ್ಟು, ಹೊಸಯುಗದ ಅರುಣನಿಗೆ ಮಂಗಲ ಕೋರಿದೆ. ಕವನದ ಎರಡನೆಯ ನುಡಿ, ವಿನಾಯಕರ ಮತ್ತೊಂದು ನವ್ಯರೂಪಕ (Myth) ಶಕ್ತಿಗೆ ಸಾಕ್ಷಿ.

"ಶಿಲೆಯೊಂದು ಜೀಳುತಿದೆ ಸಾಗರದಿ. ಅದರ ಮೇಲೆ
ಒಂದು ಹಣೆಗಣ್ಣು.
ಸಸಿಯೊಂದು ಇಳಿಯುತಿದೆ ಅದರ ಕುಸಿರೆಲೆಯ ತುಂಬ
ಕುಣಿವ ಹೆಣ್ಣು;
ಜಾರಿ ರೆಂಬೆಯ ನಂಬಿ ಕುಳಿತಿರುವ ಮನದ ಮಂಗ
ನೋಡುತಂಗೈಯ್ಯ ಹುಣ್ಣು."

ಕವನದ ಇನ್ನುಳಿದ ಭಾಗದಲ್ಲಿ ಮಾನವಸಂಸ್ಕೃತೇತಿಹಾಸದ ಪ್ರಸ್ತಾಪವೂ ಬಂದಿದೆ. ಅವರ 'ಇಲ್ಲ' ಹೊಸ ಪರಿಸರದ ಪ್ರಜ್ಞೆಯಿಂದೊಡಗೂಡಿ, ನವ್ಯ ವ್ಯಂಗ್ಯೋಕ್ತಿಗಳ ಮಾಲೆಯೊಂದನ್ನು ಹೆಣೆದಿದೆ. 'ದಂದ್ವಮಯ ಜಗತ್ತು' ಎಂಬಲ್ಲಿ ಜಗದ ಮೋಸವನ್ನು ಗುರುತಿಸಿ, ದಿವ್ಯ ಬಾಳಿಗಾಗಿ ವಿಧಾತನ ಅಭಯ ಬರಲಿದೆ ಎಂದು ಹೇಳಲಾಗಿದೆ.

ಈ ಉದಾಹರಣೆಗಳಿಂದ ವಿನಾಯಕರ ನವ್ಯಕಾವ್ಯದ ವೈಶಿಷ್ಟ್ಯವನ್ನು ನಾವು ತಿಳಿಯಬಹುದು. ಅದು ನಮ್ಮ ನೆಲದ ಗುಣಧರ್ಮಕ್ಕನುಸಾರವಾಗಿ ಬಂದ ಬೆಳೆ. ವಸ್ತುಗಳ ಆಯ್ಕೆಯಲ್ಲಿ ಮತ್ತು ಅವುಗಳನ್ನು ನಿವೇದಿಸುವ ತಂತ್ರವಿಧಾನಗಳಲ್ಲಿ ಅವರ ಸಮನ್ವಯದೃಷ್ಟಿ ಹೇಗೆ ಅನುರೂಪವಾದ ನವ್ಯತೆಯನ್ನು ನಿರ್ಮಿಸಿದೆ ಎಂದು ಗೊತ್ತಾಗುವದು. ಹೊಸ ಪ್ರತಿಮಾವಿಧಾನಗಳಿಂದ ಮತ್ತು ಪ್ರತೀಕ

ವಾದದ ಒಳ್ಳೆಯ ಗುಣಗಳಿಂದ ಪರಂಪರೆಯ ಸತ್ವವನ್ನು ನನ್ಮೆದುರು ಇ
ಅವರ ರೀತಿಯಲ್ಲಿ ಯಾವ ಕೃತ್ರಿಮತೆಯೂ ಕಾಣದಿರುವದೇ ಅದರ ಹಿರಿಮೆ.

:: ೪ ::

ವಿನಾಯಕರು ನವ್ಯಕವಿತೆಗಳನ್ನು ಪ್ರಕಟಿಸಿದ ನಂತರ, ನವ್ಯತೆ
ಇನ್ನೊಂದು ಪ್ರಕಾರ ನಮ್ಮ ಕಾವ್ಯಕ್ಕೆ ಬಂದು ಕೂಡಿತು. ಇದು ನೇರವಾಗಿ ಆಂ
ಕವಿಗಳಾದ ಈಲಿಯಟ್, ಆ:ಡೆನ್‌ರಿಂದ ಸ್ಫೂರ್ತಿ ಪಡೆಯಿತು. ಇದರ ಪ್ರವರ್ತನ
ಶ್ರೀಮಾನ್ ಅಡಿಗರೇ ಕಾರಣ. ಮತ್ತು ಅವರು ಅದನ್ನು ತಮ್ಮ "ನಡೆದು ಬ
ದಾರಿ"ಯಿಂದ ಪ್ರಾರಂಭಿಸಿದರು. ಆನಂತರ ಉಳಿದ ಕೆಲವು ತರುಣ ಕವಿಗ
ಅವರನ್ನು ಹಿಂಬಾಲಿಸಿದರು.

ಈಗಾಗಲೇ ಈ ಪ್ರಕಾರದ ಕಾವ್ಯದ ರಸಸ್ಥಾನಗಳನ್ನು ಈಲಿಯಟ್ ಕಾ
ಪ್ರಶಂಸಕರಾದ ಇಂಗ್ಲೀಷ ಬಲ್ಲ ಕನ್ನಡ ರಸಾಭಿಜ್ಞರು ಗಮನಿಸದೆ ಇಲ್ಲ. ವಿನಾ
ಯಕರೂ ಅದರ ಸಹೃದಯ ವಿಮರ್ಶಕರಾಗಿ ಅದರ ಗುಣವನ್ನು ಒಪ್ಪಿದ್ದಾ
ಇದಕ್ಕೆ ಅವರು 'ನವ್ಯಧ್ವನಿ' ಕವನ ಸಂಕಲನಕ್ಕಾಗಿ ಆಯ್ದ ಕವನಗಳು ಮತ್ತ
ಅದಕ್ಕೆ ಬರೆದ ವಿದ್ವತ್‌ಪೂರ್ಣ ಮುನ್ನುಡಿಯೇ ಸಾಕ್ಷಿ. 'ವ್ಯಂಗ್ಯ ನವ್ಯಕವಿತೆಗ
ಎಂಬ ವಿಭಾಗದಲ್ಲಿ ನವ್ಯರನ್ನು ಸ್ವಾಗತಿಸಿ, ಕೊನೆಗೆ ಬರೆದ ಮಾತುಗಳು ಒ
ಮನನೀಯವಾಗಿವೆ. "ಬರಿ ನವ್ಯಮಾರ್ಗದಲ್ಲಿ ಬರೆಯಲು ಪ್ರಾರಂಭಿಸಿದವರಿಗ
ಈ ದಾರಿ ಮೀಸಲಿಂದಲ್ಲ, ಯಾವ ಕವಿಯೂ ಈ ದಾರಿಯನ್ನೂ ತುಳಿಂ
ಬಹುದು. ಅನೇಕ ತಂತ್ರಗಳಂತೆ ನವ್ಯತೆಯೂ ಒಂದು ತಂತ್ರ, ಒಂದು ವಿಧಾನ
ಯಾವ ಕವಿಯೂ ಅದನ್ನು ಬಳಸಿಕೊಳ್ಳಬಹುದು."

ನವ್ಯತೆಯಿಂದ ನಾವು ಎಷ್ಟನ್ನು ಸ್ವೀಕರಿಸಬೇಕು ಎಂಬ ಮಾತನ
ವಿನಾಯಕರು ಒಳ್ಳೇ ಮಾರ್ಮಿಕವಾಗಿ ಹೇಳಿದ್ದಾರೆ. ಆದರೆ ನವ್ಯರು ಇತ್ತೀಚೆ
ಹೊರಟ ದಾರಿ ಬೇರೆಯಾಗಹತ್ತಿದೆ. ವಾಸ್ತವವಾದಿಗಳಾಗಬೇಕೆಂದು ಹೇಳ
ಳುವ ಅವರು, ನವ್ಯದ ಕಾದಂಬರಿಕಾರರಂತೆ ಅತಿವಾಸ್ತವವಾದಿಗಳಾಗಹತ್ತಿದ್ದಾ

ಹಾಗಾಗಿಯೇ ನವ್ಯರು ತಮಗೆ ಅನಾಸ್ಥೆ ತೋರಿಸಿದೆಲ್ಲರನ್ನೂ ಪರಂಪರಾವಾದಿಗಳು, ಸನಾತನಿಗಳು ಎಂದು ಟೀಕಿಸುತ್ತಿದ್ದಾರೆ. ಅಂತೂ ಇಂಥ ಪರಿಸ್ಥಿತಿ ಸಾಹಿತ್ಯದಲ್ಲಿ ಹುಟ್ಟುತ್ತಿದ್ದುದು ಶೋಚನೀಯ.

ಹಾಗಾದರೆ ಈಲಿಯಟ್-ಕಾವ್ಯದ ಪುರಸ್ಕರ್ತರಾದ ನವ್ಯರ ಹಾದಿ ಎಲ್ಲಿ ತಪ್ಪುತ್ತಿದೆ ಎಂದು ನೋಡುವದು ವಿಹಿತ. ಹೀಗಿದ್ದಲ್ಲಿ ನವ್ಯಕಾವ್ಯಪ್ರವರ್ತಕರು ಅಪ್ರಸ್ತುತವಾದಿಗಳೇ? ಈಲಿಯಟ್‌ರ ವಿಷಯವಾಗಿ ಕನ್ನಡದಲ್ಲಿ ಪ್ರಶಂಸೆ ಮಾಡುತ್ತಿದ್ದ ಆಂಗ್ಲ-ಕನ್ನಡ ಭಾಷಾಭಿಜ್ಞರು ಹಾಗೆನ್ನಲು ಬರುವಂತಿಲ್ಲ. ಅಂತೂ ಈ ಪ್ರಶ್ನೆ ಭಾರತದ ಎಲ್ಲ ಸಾಹಿತ್ಯಗಳಲ್ಲಿಯೂ ಹುಟ್ಟಿದ ನವ್ಯರ ಬಗ್ಗೆ ಕೇಳತಕ್ಕ ಪ್ರಶ್ನೆಯಾಗಿದೆ. ಅದಕ್ಕೆ ಅಡಿಗರೇ ಕರೆದಂತೆ ' ಹೊಸ ತಲೆಮಾರಿ 'ನವರಾದ ನಾವೆಲ್ಲರೂ ಇದನ್ನು ಉತ್ತರಿಸಲೇಬೇಕು. ಇದು ನಮ್ಮೆಲ್ಲರ ಜವಾಬುದಾರಿಯ ಕಾರ್ಯವಾಗಿದೆ.

ಅದಕ್ಕಾಗಿ ನಿಷ್ಪಕ್ಷಪಾತ ದೃಷ್ಟಿಯಿಂದ ನಮ್ಮ ನವ್ಯರ ಕಾವ್ಯಕ್ಕೆ ಸ್ಫೂರ್ತಿ ಸೆಲೆಯಾದ ಆಂಗ್ಲ ನವ್ಯಕಾವ್ಯದ ಹಿನ್ನೆಲೆಯನ್ನು ಮುಖ್ಯತಃ ಈಲಿಯಟ್ ಕಾವ್ಯದ ಹಿನ್ನೆಲೆಯನ್ನು – ಪರೀಕ್ಷಿಸಬೇಕು. ಮತ್ತು ಆಂಗ್ಲ ನವ್ಯರಿಂದ ಯಾವುದನ್ನು ನಾವು ಸ್ವೀಕರಿಸಿದ್ದೇವೆ, ಯಾವುದನ್ನು ಬಿಟ್ಟಿದ್ದೇವೆ ಎಂಬುದನ್ನು ತಿಳಿಯುವದೂ ಅಗತ್ಯ. ಅದರಲ್ಲಿ ಸ್ಫೂರ್ತಿಯ ಭಾಗ ನಾವು ಎಷ್ಟು ಪಡೆದಿದ್ದೇವೆ, ಅದರ ವೈಚಾರಿಕ ಹಿನ್ನೆಲೆಯ ಎಷ್ಟನ್ನು ನಮ್ಮದನ್ನಾಗಿಸಿಕೊಂಡಿದ್ದೇವೆ — ಎಂಬ ಸಂಗತಿಗಳೆಲ್ಲ ನಮ್ಮ ಇಂದಿನ ನವ್ಯತೆಯ ಅವಸ್ಥಾಂತರವಾದ ಅತಿನವ್ಯತೆಯ ಪ್ರಸ್ತುತ ಮತ್ತು ಅಪ್ರಸ್ತುತ ಗುಣಗಳ ಮೇಲೆ ವಿಶೇಷ ಬೆಳಕನ್ನು ಚೆಲ್ಲುವವು.

ಸಾಮಾನ್ಯವಾಗಿ ಯಾವದೇ ದೇಶದ ಸಾಹಿತ್ಯ ಅಥವಾ ಕಾವ್ಯ ರೂಪುಗೊಳ್ಳುತ್ತಿರುವಾಗ ಆ ಆ ದೇಶದ ಸಮಕಾಲೀನ ಯುಗದ ಪರಿಸರ (Milieu) ಮತ್ತು ಆಗ ಪ್ರಚಲಿತವಿರುವ ವೈಚಾರಿಕ ಪ್ರವಾಹಗಳು (Contemporary Schools of Thought) — ಇವೆರಡೂ ಘಟಕಗಳು ಆ ದೇಶದ ಸಾಹಿತ್ಯ ಅಥವಾ ಕಾವ್ಯದ ಮೇಲೆ ಅತಿ ಮಹತ್ತರವಾದ ರೀತಿಯಲ್ಲಿ ಪ್ರಭಾವ ಬೀರುವವು. (ಇಲ್ಲಿ ಕಾವ್ಯದ ಇನ್ನೊಂದು ಪ್ರಭೇದವುಂಟು. ಅದಕ್ಕೆ ಶುದ್ಧಕಾವ್ಯ (Pure poetry) ಎಂದು ಹೆಸರು. ಅದು ಇವೆರಡರ ನಿಕಟ ಸಂಬಂಧವನ್ನಿಟ್ಟುಕೊಳ್ಳದೆ ಬೆಳೆಯಬಲ್ಲದು. ಅದಕ್ಕೆಂತಲೇ ಅಂಥ ಕಾವ್ಯವನ್ನು ಓರ್ವ ಇಂಗ್ಲಿಷ ಕವಿ ವಿಮರ್ಶಕರು–

Experience of a void ಎಂದು ಕರೆದಿದ್ದಾರೆ. ಬ್ಲೇಕನ Songs o
Innocence and Experience, ಜಾರ್ಜ ರಸ್ಸೆಲ್‌ರ Visions, ವಾಲ್ಟರ
ಲಾಮೇನ ಶಿಶುಗೀತೆಗಳು ಮತ್ತು ಕನಸಿನ ಚಿತ್ರಗಳು – ಈ ಕಾವ್ಯಪ್ರಭೇದ
ಸೇರಿದವುಗಳಾಗಿವೆ. ಸದ್ಯ ಇಂಥ ಕಾವ್ಯ ನಮ್ಮ ಚರ್ಚೆಗೆ ತೀರ ಅವಶ್ಯವೆಂದನಿ
ಲಾರದು. ಆದ್ದರಿಂದ ಅದರ ವಿಚಾರ ಬೇಡ.

ಮೊದಲನೆಯಡಾಗಿ ಈಲಿಯಟ್-ಕಾವ್ಯದ ಹಿನ್ನೆಲೆಯಾದ ಯುರೋಪ
ಪರಿಸರದ ವಿಚಾರ :— ೧೭ನೆಯ ಶತಮಾನದಿಂದ ಇಲ್ಲಿಯ ವರೆಗೆ ಸಿದ್ಧಾಂತಿ
ಸ್ವರೂಪದಲ್ಲಿದ್ದ ವಿಜ್ಞಾನ ಈಗ ಪ್ರತ್ಯಕ್ಷ ಸೃಷ್ಟಿಗೆ ಬರಹತ್ತಿದ್ದಿತು. ಯಾಂತ್ರಿ
ಕರಣ ಮತ್ತು ಔದ್ಯೋಗೀಕರಣದಿಂದ — ಸನಾತನ ಅಂದರೆ ಈ ಮೊದಲಿ
ಕಾವ್ಯಕ್ಕೆ ಹಿನ್ನೆಲೆಯಾದ ಅಂದರೆ ಸುಮಾರು ೧೮೯೦ ರ ವರೆಗೂ ಹಿನ್ನೆಲೆಯಾ
ಸಾಂಘಿಕ ಜೀವನ, ಸಮಾಜಪ್ರೇಮ, ಪ್ರಾಚೀನ ವಿಧಿನಿಯಮಗಳಲ್ಲಿ ನೆಯು
ದೈವಿಕ ಕಲ್ಪನೆ, ಬಂಧುಪ್ರೇಮ, ದೇವಭಕ್ತಿ – ಇವೆಲ್ಲವುಗಳ ಸುಂದರ ಸಮನ್ವ
ವಾದ ಕುಟುಂಬಘಟಕವೇ (Family unit) ಈಗ ಒಡೆದುಹೋಯಿತು. ಇ
ಪರಿಣಾಮವಾಗಿ ವೈಯಕ್ತಿಕಮನೋಭಾವ ಮತ್ತು ಅದರಿಂದುಂಟಾದ ಪ್ರತ್ಯೆ
ಕತಾಭಾವ, ಏಕಾಂತವಾಸದ ಸಂತೋಷ ಮತ್ತು ಅದರ ಭಯಾನಕ ಕಷ್ಟಗ
(Horrors of Solitude) ಆಫೀಸು ಮತ್ತು ಫ್ಯಾಕ್ಟರಿಗಳಲ್ಲಿಯ ನೌಕರಿ, ತಾ
ವಾಸಿಸುತ್ತಿದ್ದ ಊರನ್ನು ಬಿಟ್ಟು, ಪರವೂರಿಗೆ ಉಪಜೀವನಕ್ಕಾಗಿ ಪ್ರಯಾ
ಹೊಟೆಲ್-ಜೀವನ, ಫಟಸ್ಪೋಟ, ಮ್ಯಾಟನೀ ಶೋದ ಸಂತೋಷ, ಬ
ಟ್ರ್ಯಾವ್ ನಿಲ್ದಾಣಗಳಲ್ಲಿಯ ಕ್ಯೂ ಅನುಭವದ ರೋಮಾಂಚನ, ಸಂಜೆ-ತಿ
ಗಾಟ, ವೀಕ್-ಎಂಡ್-ಟ್ರಿಪ್, – ಇವೆಲ್ಲವೂ ತಲೆದೋರಿದವು. ಮತ್ತು ಇ
ಗಳಿಂದಲೇ ಸಾಂಘಿಕ ದೃಷ್ಟಿಯುಳ್ಳ ಮತ್ತು ಸುರಕ್ಷಿತತೆಯ ವಾತಾವರಣವ
ಕೌಟುಂಬಿಕ ದೃಷ್ಟಿಯೇ ಒಡೆದು ಪುಡಿಪುಡಿಯಾಗಿ, ಹೊಸಬರ ಅರ್ಥಾತ್ ನ
ಕಾವ್ಯದ ಅನಾಥಪ್ರಜ್ಞೆ ( Sense of rootlessness owing to disin
gration of the family) ಹುಟ್ಟಿಕೊಂಡಿತು. ಮತ್ತು ಇಂಥ ನಾಗರೀಕತೆ
ಪರಿಸರವೇ ಈಲಿಯಟ್-ಕಾವ್ಯಕ್ಕೆ ಹಿನ್ನೆಲೆಯಾಯಿತು. ಇವಕ್ಕೆ ಪೂರಕವ
ಯೇನೇ ಆ ಕಾಲದಲ್ಲಿ ಮೊದಲನೆಯ ಮಹಾಯುದ್ಧ ಆ ಜನರ ಮಧ್ಯದಲ್ಲಿ ಪ್ರ
ಕ್ಷವಾಗಿ ಸಂಭವಿಸಿ ಜನತೆಯ ಕರುಳನ್ನೇ ಹಿಂಡಿ ಅವರಲ್ಲಿಯ ಈ ಅನಾಥ

ಯನ್ನು ಇಮ್ಮಡಿಯಾಗಿ ಹೆಚ್ಚಿಸಿತು. ನೈತಿಕ ಅಧಃಪತನ ಹೊಂದಿ ನಿಸ್ಸತ್ವವಾಗಿ, ಅಧೋಗತಿಗಿಳಿಯುತ್ತಿದ್ದ ನಾಗರೀಕತೆಯ ದಾರುಣಕ್ರಂದನವೇ — (Waste Land) ದಲ್ಲಿ ಹೊರಹೊಮ್ಮಿತು. ಇದು ಕಾವ್ಯದ ಜನ್ಮಕ್ಕೆ ಬೇಕಾದ ಪರಿಸರದ ಮಾತಾಯಿತು. ಇನ್ನು ಎರಡನೆಯದಾಗಿ, ಕಾವ್ಯದ ಮೇಲೆ ಪ್ರಭಾವ ಬೀರುವ ಮತ್ತು ಸಮಕಾಲೀನ ವೈಚಾರಿಕ ಪ್ರವಾಹಗಳ ಬಗ್ಗೆ ವಿಚಾರ:— ಈಲಿಯಟ್ ಕಾವ್ಯರಚನೆಯ ಹಿಂದೆ— ಇಂಗ್ಲಿಷ ಕಾವ್ಯದಲ್ಲಿ ತಲೆದೋರಿದ ಅನೇಕ ವಾದಗಳ ಮತ್ತು ಕಾವ್ಯಪಂಥಗಳ ಒಂದು ಬೃಹತ್ತರವಾದ ರಮ್ಯ ಇತಿಹಾಸವಿದೆ. ಇವೆಲ್ಲವೂ ಅವನ ಕಾವ್ಯತಂತ್ರಕ್ಕೆ ಒಂದಿಲ್ಲೊಂದು ರೀತಿಯಿಂದ ಸಹಾಯಕವಾಗಿವೆ. ಸ್ಥೂಲದ ಲ್ಲಿ ಹೇಳಬೇಕೆಂದರೆ – ಪೇಟರನ ನವೀನ ಸೌಂದರ್ಯಾನುಭೂತಿತತ್ವ, ಫ್ರಾನ್ಸದ ಮೆಲಾರ್ಮೆಯಿಂದ ಬಂದ ಪ್ರತೀಕವಾದ, ಈಲಿಯಟ್‌ನಿಗೆ ಪರಿಚಿತರಾದ ಎರ ಜ್ರಾ ಪೌಂಡ್, ಮತ್ತು ಟಿ. ಇ. ಹ್ಯೂಮರಿಂದ ಬಂದ ಪ್ರತಿಮಾವಾದ, ಸ್ವತಃ ಈಲಿಯಟ್‌ನೇ ಶೋಧಿಸಿದ ೧೭ನೇ ಶತಮಾನದ ಡನ್ ಕವಿಯ ತರ್ಕಾತ್ಮಕ ಭಾವ ಗೀತೆಗಳ (Argumentative Lyrics) ರಚನಾಕೌಶಲ್ಯ, ಆಗ ಅದೇ ಹಬ್ಬುತ್ತಿದ್ದ ಈರ್ವರು ಮಾನಸಶಾಸ್ತ್ರಜ್ಞರಾದ ಫ್ರಾಯಿಡ್ ಮತ್ತು ಯುಂಗರ ಮನೋವಿಶ್ಲೇಷಣಾತ್ಮಕ ತತ್ವ ಮತ್ತು ಫ್ರೇಜರನ ಜನಾಂಗವಿಜ್ಞಾನ ಇಷ್ಟಲ್ಲದೇ ಕಾದಂಬರೀ ಕ್ಷೇತ್ರದಲ್ಲಿ ಈಗಾಗಲೇ ಕಾಣಿಸಿಕೊಂಡ ಸಹಜತಾವಾದ – ಇವೆಲ್ಲವೂ ಈಲಿಯಟ್‌ನಿಗೆ ರಕ್ತಗತವಾಗುವಷ್ಟು ಅನುಭವದಿಂದ ಪಡೆದಂಥವುಗಳಾಗಿದ್ದವು.

ಇಂಗ್ಲಿಷ ನವ್ಯಕಾವ್ಯಕ್ಕೆ ಇಂಥ ಸಜೀವ ಹಿನ್ನೆಲೆ ಇದ್ದುದನ್ನು ನೋಡಿಕೊಂಡು ಕನ್ನಡದ ನವ್ಯಕಾವ್ಯದ ಹಿನ್ನೆಲೆಯನ್ನು ಪರೀಕ್ಷಿಸಹೋದರೆ, ನಮ್ಮಲ್ಲಿ ನಮ್ಮದರ ಬಗ್ಗೆ ಅನುಮಾನವೇಳುವದು ತೀರ ಸಹಜ. ಮೇಲೆ ನಿರೂಪಿಸಿದ ಕಾವ್ಯಪೋಷಣೆಗೆ ಅವಶ್ಯವಿದ್ದ ಎರಡು ಘಟಕಗಳಲ್ಲಿ, ಒಂದೊಂದರ ಪ್ರತ್ಯಕ್ಷ ಪರಿಣಾಮ ಎಷ್ಟರ ಮಟ್ಟಿಗೆ ನಮ್ಮ ನವ್ಯಕಾವ್ಯದ ಮೇಲೆ ಆಗಿದೆ? ಎಂಬುದೇ ಪ್ರಶ್ನೆ. ಈ ಪ್ರಶ್ನೆ ನಮ್ಮ ಭಾಷೆಗೊಂದೇ ಕೇಳಲ್ಪಡತಕ್ಕದ್ದಲ್ಲ, ಭಾರತದ ಇನ್ನುಳಿದ ಭಾಷಾಸಾಹಿತ್ಯಗಳಿಗೂ ಕೇಳುವಂಥದ್ದಾಗಿದೆ.

ಪರಿಸರದ ಬಗ್ಗೆ ನಿಷ್ಪಕ್ಷಪಾತವಾಗಿ ಹೇಳಬೇಕಾದರೆ – ಯುದ್ಧ ನಮ್ಮಲ್ಲಿ ಸಂಭವಿಸಲಿಲ್ಲ. ಯಾಂತ್ರೀಕರಣ ಪಾಶ್ಚಾತ್ಯದೇಶದಲ್ಲಿ ನಡೆದಷ್ಟು ವೇಗವಾಗಿ ನಮ್ಮಲ್ಲಿ ನಡೆಯಲಿಲ್ಲ. ಆದರೆ ಕೆಲವು ಸೌಮ್ಯಸ್ವರೂಪದ ಘಟನೆಗಳು ಮಾತ್ರ

ನಮ್ಮಲ್ಲಿ ಸಂಭವಿಸಿವೆ. ದೇಶವಿಭಜನೆ (ಅದೂ ಉತ್ತರಭಾರತದಲ್ಲಿ), ಬಂಗಾಲ ವಿಜಾಪುರ, ಕೋಲಾರಗಳಲ್ಲಿಯ ಬರಗಾಲ, ಕಮ್ಯೂನಿಝುವ.ದ ಪ್ರಸಾರ, ರಾ ಧಾನಿ ಸ್ಥಳಗಳಲ್ಲಿ ಸಾವಕಾಶವಾಗಿ ನಡೆಯುತ್ತಿದ್ದ ಔದ್ಯೋಗೀಕರಣ, ಇವ ಹೆಚ್ಚಾಗಿ ನಮ್ಮ ಕುಟುಂಬದ ಕಟ್ಟನ್ನು ಒಡೆದು, ನಮ್ಮ ಅನಾಥಪ್ರಜ್ಞೆಗೆ ಕಾರ ವಾದವು. ಆದರೆ ಇದನ್ನು ನಾವು ಐರೋಪ್ಯರಷ್ಟು ಬಲವತ್ತರವಾಗಿ ಅನುಭ ಸಿದ್ದೇವೆಯೋ? ಎಂಬ ಪ್ರಶ್ನೆ ಬರುವದು. ಅಂತೂ ಈ ವಿಷಯದಲ್ಲಿ ಒಂದು ತ ಹದ ( Imaginative Realization ) ಎರಡನೆಯುವರಿಗೆ ದೊರೆತ ಅನುಭ ವನ್ನು ನಾವು ಕಾಲ್ಪನಿಕವಾಗಿ ಗ್ರಹಿಸಿಕೊಂಡು, ಅಂಥ ಹಿನ್ನೆಲೆಯನ್ನು ಸೃಷ್ಟಿ ಕೊಂಡಿದ್ದೇವೆ ಎಂಬ ಗುಪ್ತಸತ್ಯವನ್ನು ಬಾಯಿಬಿಚ್ಚಿ ಬಹಿರಂಗವಾಗಿ ಒ ಕೊಳ್ಳುವದು ವಿಹಿತ.

ಇನ್ನು ವೈಚಾರಿಕ ಹಿನ್ನೆಲೆಯ ವಿಷಯುವಾಗಿ ಹೇಳುವದಾದರೆ – ಅದನ ನಾವು ಹೆಚ್ಚಾಗಿ ಓದಿನಿಂದ ತಿಳಿದುಕೊಂಡದ್ದು. ಈಲಿಯಟ್‌ನ ಹಿಂದೆ ಇಂಗ್ಲಿಷಿನ ಬರೆದಿಟ್ಟ ಕಾವ್ಯಪಂಥಗಳ ಇತಿಹಾಸ ಅನಾಯಾಸವಾಗಿ ನಮ್ಮ ಸೊತ್ತಾಯಿತು.

ಅಂತೂ ಒಂದು ದೃಷ್ಟಿಯಿಂದ – ಈಲಿಯಟ್‌ನ ನವ್ಯತೆಯ ಸ್ಫೂರ್ತಿ ಕನ್ನ ನವ್ಯಕಾವ್ಯಕ್ಕೆ, ಅರ್ಧ ಸಹಜ, ಇನ್ನರ್ಧ ಅಸಹಜ ಎನ್ನುವ ವಾತಾವರಣದ ಬಂದಿತು. ಬಂದ ಮೇಲಂತೂ ಅನಿವಾರ್ಯವಾಗಿ ಸ್ವೀಕರಿಸಲೇಬೇಕಾಯಿತು ಅದರಂತೆ ಸ್ವೀಕರಿಸಿದ್ದೇವೆ. ಇದರಲ್ಲಿ ತಪ್ಪೇನೂ ಇಲ್ಲ. ಆದರೆ ಈ ಮಾರ್ಗದ ಮುನ್ನಡೆಯುತ್ತಿರುವಾಗ ಆಗುವ ತಪ್ಪುಗಳಿಗಾಗಿ ಈ ಹಿನ್ನೆಲೆಯ ವಿವೇಚ ಅತ್ಯವಶ್ಯವಾಯಿತು. ಇಲ್ಲಿ ಮಾತ್ರ ಸಮನ್ವಯದೃಷ್ಟಿಯ ವಿನಾಯಕರ ಕಾವ್ಯ ಮಾರ್ಗದ ಸಹಜತೆಯ ಮಹತ್ವ ನಮಗೆ ಸರಿಯಾಗಿ ವೇದ್ಯವಾಗುವದು.

ಶ್ರೀಮಾನ್ ಅಡಿಗರು ಈಲಿಯಟ್ ಕಾವ್ಯದೃಷ್ಟಿಗೆ ' ಚಂಡೆಮದ್ದಳೆ (೧೯೫೪) ಯಿಂದ ಮತಾಂತರವನ್ನೇ ಹೊಂದಿದರು. ಅದಕ್ಕೆ ಕವಿಯ ಅಂತ ಪ್ರವೃತ್ತಿಗಳೂ ಇಂಬುಗೊಟ್ಟಿರಬಹುದು. ಮತ್ತು ಜೀವಂತ ಸಾಹಿತ್ಯಕ್ಕೆ ಇಂ ಮತಾಂತರಗಳ ಅವಶ್ಯಕತೆ ಇದ್ದೇ ಇದೆ. ಆದರೆ ತೊಂದರೆ ಉದ್ಭವಿಸುವದ ಮತಾಂತರಕ್ಕಾಗಿ ಅಲ್ಲ, ಆದರೆ ದಿನಗಳೆದಂತೆ ಆಗುತ್ತಿದ್ದ ಅದರ ಅಧೋಗ ಗಾಗಿ.

ಈ ಮೊದಲು ಹೇಳಿದಂತೆ ನವ್ಯದರ ಸೌಂದರ್ಯಸ್ಥಾನಗಳೇ ಬೇರೆ ಇವ

ಅವುಗಳ ನವ್ಯತೆಯನ್ನು ಎಲ್ಲರೂ ಒಪ್ಪುತ್ತಾರೆ. ಅಡಿಗರ 'ನಡೆದು ಬಂದ ದಾರಿ' ಯಲ್ಲಿ ಇವನ್ನು ಗುರುತಿಸಬಹುದು.

ನವ್ಯದರ ಸಾಧನವಾದ ತೀಕ್ಷ್ಣವಾಸ್ತವಿಕವಾದದ ದೃಷ್ಟಿ ಮತ್ತು ಹೊಸ ನಾಗರಿಕತೆಯ ಫಲವಾಗಿ ಸುತ್ತಲೂ ಹಬ್ಬುತ್ತಿರುವ ರಾಜಕೀಯ, ಸಾಮಾಜಿಕ ವಿಷಮ ವ್ಯವಸ್ಥೆಗಳು – ಅವರನ್ನು ತಪ್ತಗೊಳಿಸಿದವು. ಹಳೆಯ ರೀತಿ-ನೀತಿಗಳ ಕಟ್ಟುಗಳನ್ನು ಬಲವಾಗಿ ವಿರೋಧಿಸಿದರು. ಈ ವಿರೋಧದ ಉನ್ಮಾದ ಮತ್ತು ಕಟುತ್ವಗಳೇ ಈ ಕಾವ್ಯದ ಆಕರ್ಷಣೀಯ ವಸ್ತುಗಳಾಗಿವೆ. ಪರಂಪರೆಯು ಕೆಲಸಕ್ಕೆ ಬಾರದ ಅನ್ಮೃತಶಿಲೆಯ ಗೋರಿಯಂತೆ ಕಂಡಿತು. ಅದರ ಕನಸಿನ ಕಲ್ಪಕತೆ, ವಸ್ತುಸ್ಥಿತಿಯ ದಾರುಣವನ್ನು ಮರೆಮಾಡಿದೆ ಎಂಬುದೇ ಅವರ ವಾದ. ಅದಕ್ಕಾಗಿ ಎದುರಿಗಿನ ಕಾರ್ಪಣ್ಯಸ್ಥಿತಿಯನ್ನು ತೋರಿಸಿ ಕಾರ್ಯಪ್ರವರ್ತರಾಗ ಬೇಕೆಂದು ಕವಿ ಹೇಳುತ್ತಾನೆ.

**ಮುಂದೆ ನೋಡು ದಾರಿ ಸಾವಿರಾರು ಮೈಲಿ ದೂರ,**
**ಸಾಲು ಸಾಲು ಡೇರ,**
**ಮರಳುಕಾಡು, ತಲೆಯ ಓಡು, ಎಲುಬುಗೂಡು ಮೆಟ್ಟಿಲು,**
**ಜೀವ ಪಟ್ಟ ತೊಟ್ಟಿಲು.**

ಆದ್ದರಿಂದಲೇ ನಡೆದು ಬಂದ ದಾರಿಯ ಕಡೆಗೆ ಕಣ್ಣು ಹೊರಳಿಸಬೇಡವೆಂದು ಅವರು ಹೇಳುತ್ತಾರೆ.

ಬರಗಾಲದ ಬವಣೆಯಲ್ಲಿ 'ಗಾಂಧಿ' ಎಂಬ ಮಾತು ಬರಿಮಾತಾಗಿ, ತಾಯಿ ಭೂದೇವಿಯು ಮರುಭೂಮಿಯಾಗಿ ಪರಿಣಮಿಸುತ್ತಾಳೆ. 'ನೀನೆ ಶರಣು, ಶರಣು! ಶುಷ್ಕ ಶೂನ್ಯ ಶರಣು' ಎಂದು ಭೂದೇವಿ – ಮರುಭೂಮಿಗೆ ಕವಿಯು ವಂದಿಸುತ್ತಾನೆ.

ಮತ್ತೆ ಮತ್ತೆ ಸಂಭವಿಸುವ ಯುದ್ಧ, ಕೊಲೆ, ಸುಲಿಗೆ ಇವುಗಳನ್ನು ಕಂಡು ಕವಿಯು ರೋಸಿಹೋಗಿ, ಮನುಷ್ಯನು ಪ್ರಾಣಿಮಾತ್ರನೆಂದೂ, ಅವನ ಹುಟ್ಟು, ಇತಿಹಾಸ, ಪಾಪಪೂರಿತವಾದವುಗಳೆಂದೂ ಅವನು ಹೇಳುತ್ತಾನೆ. ನವ್ಯರ — ಅದೂ ಶ್ರೀಮಾನ್ ಅಡಿಗರ – ಈ ಪಾಪದ ತಿಳುವಳಿಕೆ (Sense of Sin) ಮತ್ತು ಅದಕ್ಕಾಗಿ ಪಾಪಿ ಸಲ್ಲಿಸುವ ಕೈಫಿಯತ್ತು (Confession) – ಈ ಕಾವ್ಯದ ಒಂದು ದುರಂತಸೌಂದರ್ಯದ ಹಿರಿಮೆ. ( ನವ್ಯಕಾವ್ಯದ ಅತಿ ಪೂರ್ವದ

ಪುರಸ್ಕೃತರಾದ ಬಾದಲೇ, ರಿಂಬೋ ಇವರಲ್ಲೆಲ್ಲ— ಪಾಪದ ಪ್ರಾಯಶ್ಚಿತ್ತ ಅ
ಘೋರ ರೂಪ ತಳೆದಿದೆ. ಈಲಿಯಟ್‌ನ ಪಾಪದ ತಿಳುವಳಿಕೆಯ ಹಿಂದೆ ಒಂದ
ಪವಿತ್ರವಾದ ಧಾರ್ಮಿಕ ಹಿನ್ನೆಲೆ ಇದೆ ಎಂಬುದು ನಮ್ಮ ನವ್ಯರು ಗಮನಿ
ಬೇಕಾದ ವಿಷಯ.)

ಶ್ರೀ. ಅಡಿಗರ 'ಭೂಮಿಗೀತ' ಮನುಷ್ಯಜನ್ಮದ ಪಾಪದ ಮೇಲೆ ಬರೆದಂ
ಒಂದು ರೌದ್ರಗೀತೆ. ಅದು ನಮ್ಮ ನವ್ಯಕಾವ್ಯದ ಸತ್ವಪೂರ್ಣ ಕವಿತೆ. ಅದ
ಸೌಂದರ್ಯ, ಸಿಡಿಲು, ಬಿರುಗಾಳಿ, ಮಿಂಚುಗಳಷ್ಟೇ ರಮಣೀಯವೂ ಅಹುದು
ಅಪಾಯಕಾರಕವೂ ಅಹುದು.

ತನ್ನ ಉಗಮ ಪಾಪಿಪ್ರಾಣಿಯೊಂದರ ಉಗಮವೆಂದು ಮನುಷ್ಯ ಟೋ
ಸುತ್ತಾನೆ :—

" ಈಡಿಪಸ್ಸಿನ ಗೂಢಪಾಪಲೇಪಿತ ನಾನು
ಟ್ರಾಕ್ಟರನ್ನೇರಿದೆನು, ಉತ್ತೆ, ಸಿಗಿದೆ.
ಬಿತ್ತಿದೆನು, ಬೆಳೆದೆ, ಆಟಂಬಾಂಬು ಕಾಳುಗಳ
ಮಾರಕಕ್ರಿಮಿ ಪೈರ ಗೋರಿ ಸಲಿದೆ. "

ದೌರಾತ್ಮ್ಯದ ತಾಂಡವವಾಡುತ್ತಿದ್ದ ಈ ಜಗತ್ತಿನಲ್ಲಿ ಬಾಳನ್ನು ಕಳೆಯುವ ಬ
ಹೇಗೆ ? ಎಂದು ಕವಿತೆಯ ಕೊನೆಯ ಭಾಗದಲ್ಲಿ ಅವನು ನಿಟ್ಟುಸಿರಿಡುತ್ತಾನೆ.

" ಕತ್ತಲಲ್ಲಿ ಕಣ್ಣುಕಾಣದ ಬೀದಿಯಿಕ್ಕಟ್ಟಿನಲಿ
ಗೋಡೆ ತಡಕುತ ಇನ್ನು ತೆವಳಬೇಕು.
ಹೆಳವನ ಮೇಲೆ ಕುರುಡ ಕೂತಿದ್ದಾನೆ;
ದಾಗಿ ಸಾಗುವದೆಂತೋ ನೋಡಬೇಕು."

:: ೫ ::

ನವ್ಯಕವಿಯು ವಸ್ತುಸ್ಥಿತಿಯ ವರ್ಣನದಿಂದ ನಮಗೆ ಭೀಕರ ತೃ
ಯೊಂದನ್ನು, ವಿಷಮಸಂತೃಪ್ತಿಯನ್ನು ದಾನಮಾಡುತ್ತಾನೆ. ಈ ಕಾವ್ಯ

ಸೌಂದರ್ಯ — ಇದರ ಉತ್ಕೃಷ್ಟ ಮಟ್ಟದಲ್ಲಿ ಹೇಳುವದಾದರೆ— ಹೆಚ್ಚು ಕಡಮೆ ದುರಂತನಾಟಕದ ಸೌಂದರ್ಯವನ್ನು ಹೋಲುತ್ತದೆ. ಇದರಿಂದ ದೊರೆಯುವ ಆನಂದ ದುರಂತ ನಾಟಕದ ಆನಂದಂತೆ ಒಂದು ' Banquet of Sorrows ' ದುಃಖದೌತಣವಾಗಿ ಪರಿಣಮಿಸುತ್ತದೆ. ಇಲ್ಲಿಯವರೆಗೆ ಇದರ ಗುಣ ಗ್ರಾಹ್ಯ ವಾದುದೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಈ ಕಾವ್ಯ ತನ್ನ ಇತ್ತೀಚಿನ ಅವ ಸ್ಥಾಂತರದಲ್ಲಿ ವಾಸ್ತವವಾದದ ಹೆಸರಿನಲ್ಲಿ ಅತಿವಾಸ್ತವವಾದಿಯಾಗಿ ಒಂದು "Big show of animal instincts" ಆಗಿ ಪರಿಣಮಿಸಹತ್ತಿದೆ. ಬಹುಶಃ ಹೊಸ ಹೊಸದನ್ನು ಸ್ವೀಕರಿಸುವ ಕಾಲಕ್ಕೆ ನಮ್ಮ ಪರಂಪರೆಗೆ ಅನುಗುಣವಾಗಿ ಸ್ವೀಕರಿಸಲಿಲ್ಲವೆಂಬುದೇ ಇದಕ್ಕೆ ಕಾರಣವಾಗಿದೆ.

ಶ್ರೀಮಾನ್ ಅಂಬಿಕಾತನಯದತ್ತರು ಈ ವಿಷಯದಲ್ಲಿ ಹೇಳಿದ ಮಾತು ನಮ್ಮ ನವ್ಯರಿಗೆಲ್ಲ ಸಮಯೋಚಿತ ಎಚ್ಚರಿಕೆಯಾಗಿದೆ:–'ವಾಸ್ತವಿಕತೆಯ ಭೀಭ-ತ್ಸವು ಆದರ್ಶವನ್ನು ನಾಸ್ತಿಕಪ್ರಾಯವಾಗಿ ಕಾಣುವದು. ಜೀವನದ ನೀರಡಿಕೆ ಆರುವದು ಸಾತ್ವಿಕವಾದ ಶುದ್ಧ ನೀರಿನಿಂದ. ನೀರಾದ ಅಮಲು ಅದನ್ನು ಪರಿಹರಿಸದು.'

ಉನ್ಮಾದ, ಮಿಂಚು, ಸಿಡಿಲು, ಬಿರುಗಾಳಿ, ನೆರೆಹಾವಳಿ, ಸಿನಿಮಾಪ್ರಪಂಚ, ಇವೆಲ್ಲವೂ ಕಾವ್ಯಮಯವಾಗಿ ರಮಣೀಯವಾಗಿವೆ ಎಂಬ ಮಾತು ನಿಜ. ಆದರೆ ಜೀವನದುದ್ದಕ್ಕೂ ಇವನ್ನು ನಮ್ಮಲ್ಲಿ ತಂದುಕೊಂಡರೆ ಬಾಳು ಮುಂದೆ ಸಾಗುವ ಬಗೆ ಹೇಗೆ? ಪ್ರಸನ್ನತೆ ಮತ್ತು ಸಮತೂಕ ಇವೇ ಬಾಳಿನ ಚಾಲಕ ತತ್ವಗಳೆಂದು ಪ್ರಪಂಚದ ಬುದ್ಧಿವಂತರೆಲ್ಲರೂ ಹೇಳುತ್ತಾರೆ.

ಅವಸಾನ ಕಾಲದ ನಾಗರೀಕತೆಯ ಭೀಕರ ಚಿತ್ರಣವನ್ನು ಕೊಟ್ಟ ಈಲಿ-ಯಟ್, ತನ್ನ ಆನಂತರದ ಕಾವ್ಯದಲ್ಲಿ ಸಮನ್ವಯಧರ್ಮವು ಕೊಡಬಲ್ಲ ಶುದ್ಧ ಸಂತೃಪ್ತಿಗೆ ತಿರುಗುತ್ತಿದ್ದಾನೆ ಎಂಬ ಮಾತನ್ನು ಅತಿ ನವ್ಯರಾಗುತ್ತಿದ್ದ ಮೊದಲಿನ ನಮ್ಮ ನವ್ಯರು ಆಳವಾಗಿ ಯೋಚಿಸಬೇಕಾಗಿದೆ.

"Quick now, here, now, always -
A condition of complete simplicity
( Costing not less than everything )
And all shall be well and

All manner of thing shall be well
When the tongues of flame are in-folded
Into the crowned knot of fire
And the fire and the rose are one"

–Little Gidding : Four Quarte

,And the fire and the rose are one' – ವಾಸ್ತವಿಕ ಬಾಳಿನ ಕಿಚ್ಚು ಮತ್ತು ಪರಂಪರೆಯಿಂದ ಮನುಷ್ಯಜೀವಕ್ಕೆ ಬಂದ ಕಲ್ಪನಾವಿಲಾಸದ ರಮ್ಯ ಇವೆರಡರ ಸಮನ್ವಯವೇ ನಮ್ಮ ಬಾಳಿನ ಶ್ರೇಯಸ್ಸು.

ಪುನಃ ಇಲ್ಲಿ ವಿನಾಯಕರ ಸಮನ್ವಯತತ್ವದ ಕಾವ್ಯದೃಷ್ಟಿ, ಮತ್ತ ಕೃತಿರಚನೆಯ ಸಮರ್ಪಕತೆಯನ್ನು ಕಂಡುಕೊಳ್ಳಬಹುದು.

ಗಾಂಧೀಯುಗದ ಆದರ್ಶವಾದ ಮತ್ತು ಸುಂದರ ಸಮಾಜರಚನೆಯ ಪ್ರವೃತ್ತಿ ಇವುಗಳ ವೈಚಾರಿಕ ಹಿನ್ನೆಲೆಯಲ್ಲಿ ಕಾವ್ಯರಚನೆಗೆ ಪ್ರಾರಂಭಿಸಿ ವಿನಾಯಕರು, ಪ್ರಗತಿಶೀಲಮಾರ್ಗದಲ್ಲಿ ಮುನ್ನಡೆದು ಆಂಗ್ಲರ ಸ್ಫೂರ್ತಿಯನ ಮತ್ತು ಐಹಿಕವಾದವನ್ನು ಭಾರತೀಯ ಆಧ್ಯಾತ್ಮಿಕ ಪರಂಪರೆಗೆ ಅಳವಡಿ ಕೊಂಡು, ಅವೆರಡೂ ಸಂಸ್ಕೃತಿಗಳ ಮನೋಜ್ಞವಾದ ಸಮ್ಮಿಲನವನ್ನು ತಮ 'ವರುಣ-ಕುಂಜ'ದ ಕಾವ್ಯದಲ್ಲಿ ಪಡೆಯಲೆತ್ನಿಸಿದರು. ತಮ್ಮ ಮೂಲ ಪ್ರಗತಿಪ ಧೋರಣೆಯಿಂದ ಮುಂದೆ ಸಾಗುತ್ತಿರುವಾಗಲೇ ಹೊಸ ಕಾವ್ಯದ ರೂಪರೇ ಗಳನ್ನು ಮೊಟ್ಟಮೊದಲಿಗರಾಗಿ ಸಿದ್ಧಾಂತಿಕ ಸ್ವರೂಪದಲ್ಲಿ ಮಂಡಿಸಿದರು. ಮುಂ ನವ್ಯದೃಷ್ಟಿಯಿಂದ ಎಷ್ಟನ್ನು ಅಳವಡಿಸಿಕೊಳ್ಳಬೇಕೋ ಅಷ್ಟನ್ನು ಸ್ವೀಕರಿಸಿ ತಮ್ಮ ಕಾವ್ಯಮಂದಿರದ ನೂತನ ಪ್ರಾಕಾರವನ್ನು ನಿರ್ಮಿಸಿದರು.

ಹೊಸ ಜಗತ್ತಿನ ಆವರಣದಲ್ಲಿಯೇ ಅವರ "ಬಾಳವೇಗುಲದಲ್ಲಿ" ಎಂ ಪವಿತ್ರ ಕಾವ್ಯಮಂದಿರವು ಕಟ್ಟಲ್ಪಟ್ಟಿದೆ. ಈಲಿಯಟ್‌ರ ಕಾವ್ಯಗಳಿಗಿರು ಸುಸಂಬದ್ಧತೆ (Unity) ಯೇ ಅದಕ್ಕಿದೆ. ಶಿಶುವಿನಿಂದ ಹಿಡಿದು ಮುಕ್ತಜೀವಿಗ ವರೆಗೂ ಇರುವ ಪವಿತ್ರ ಮನಸ್ಸಿನ ಮಹಾಮಹಿಮರ ನೆರವಿ ಅಲ್ಲಿದೆ. ವಿನಾಯಕ ಕಾವ್ಯ ಅವರನ್ನು ಕೀರ್ತಿಸುವದರಲ್ಲಿಯೇ ತನ್ನ ಕೃತಕೃತ್ಯತೆಯನ್ನು ಪಡೆದಿದೆ ಮಂತ್ರೋಚ್ಚಾರಣೆಯಂತೆ ಅವರ ಕಾವ್ಯದ ಗಂಭೀರ ಮೊಳಗು ನಮ್ಮ ಮನ ಮಂದಿರದಲ್ಲಿ ಪ್ರತಿಧ್ವನಿತವಾಗುತ್ತದೆ.

" ಬಾಳದೇಗುಲದಲ್ಲಿ
ಚಿರಸನಾತನರಿವರು
ಬಾಳ್ಮೊದಲ ಬಲ್ಲವರು, ಬಹು ಪುರಾತನರು.
ಹೀಗಿದ್ದು ಯುಗಯುಗಕೆ
ಸಿಗುವ ಸನ್ನಿಧಿಯಿವರು;
ಸಂಕ್ರಾಂತಿಪುರುಷರೈ, ನಿತ್ಯನೂತನರು."

ಬಾಳದೇಗುಲದ ಈ ಮುಕ್ತಜೀವಿಗಳ ವೈಶಿಷ್ಟ್ಯದಂತೆ, ವಿನಾಯಕರ ಕಾವ್ಯದ ಮೂಲವು 'ಚಿರಸನಾತನ'ವಾದರೂ, ಹೊಸ ಪರಿಸರದಲ್ಲಿ ಅದಕ್ಕೆ 'ನಿತ್ಯನೂತನ'ದ ಭದ್ರಮುದ್ರೆ ಇದೆ. ಅಂತಲೇ ಅದರ ಸಾರ್ವತ್ರಿಕತೆ (Universality) ನಿರ್ವಿವಾದವಾದುದು.

# ಶ್ರೀ. ವಿನಾಯಕರ 'ಜನನಾಯಕ'

ಶ್ರೀ. ವಿನಾಯಕರು ಬರೆದ ನಾಟಕಗಳಲ್ಲಿ ಎಲ್ಲಕ್ಕೂ ಮಹತ್ವಪೂರ್ಣವಾದದ್ದು ಅವರ 'ಜನನಾಯಕ'. ಈ ನಾಟಕವು ೧೯೩೬ನೆಯ ಜ್ಯಾನುವರಿ ತಿಂಗಳಲ್ಲಿ ಪುಣೆಯ ಅಮೇಚ್ಯೂರರಿಂದ ಆಡಲ್ಪಟ್ಟಿತು. ನಂತರ ಬರೆದ 'ಯುಗಾಂತರ' ನಾಟಕದ ಗುಣದೋಷಗಳು ತಮ್ಮ ಮಟ್ಟಿಗೆ ಯಾವವೇ ಇದ್ದರೂ ಕೂಡ, ಕನ್ನಡದಲ್ಲಿ ನಾಟಕಸಂಪ್ರದಾಯದ ಬೆಳವಣಿಗೆಯ ದೃಷ್ಟಿಯಿಂದ ಅಷ್ಟೊಂದು ಮಹತ್ವದ್ದಲ್ಲವೆಂದು ನನ್ನ ಅಭಿಪ್ರಾಯ. ಶ್ರೀ. ವಿನಾಯಕರು ಅದೇ ಬಗೆಯ ಇತರ ಪ್ರಯೋಗಗಳನ್ನು ಮಾಡಿ ತಮ್ಮ ಅನುಭವದ ಪಾಕವನ್ನು ಕನ್ನಡಿಗರಿಗೆ ಕೊಡಮಾಡದಿದ್ದುದು ವಿಷಾದಕರ. ತಂತ್ರದ ದೃಷ್ಟಿಯಿಂದ ನೋಡಲಾಗಿ ಅನಂತರ ಬರೆದ ನಾಟಕಗಳು (ತುಳಸಿ ಒಂದನ್ನು ಬಿಟ್ಟು) ಚಿತ್ತಗ್ರಾಹಕವಾಗಿಲ್ಲ. ನಾಟಕದ ದೃಷ್ಟಿಯಿಂದ ವಿನಾಯಕರು ಕನ್ನಡಿಗರಿಗೆ ಇನ್ನೂ ನ್ಯಾಯದಾನ ಮಾಡಬೇಕಾಗಿದೆ.

'ಜನನಾಯಕ' ನಾಟಕದ ಗುಣದೋಷಗಳನ್ನು ಚರ್ಚಿಸುವ ಮೊದಲು ಅದರ ತಾಂತ್ರಿಕ ಹಾಗೂ ಐತಿಹಾಸಿಕ ಮಹತ್ವವನ್ನು ಚರ್ಚಿಸೋಣ. ಬರುವ ಪೀಳಿಗೆಯಲ್ಲಿ ಕನ್ನಡ ನಾಟಕದ ಐತಿಹಾಸಿಕ ಬೆಳವಣಿಗೆಯನ್ನು ಅಭ್ಯಾಸ ಮಾಡ ಹೊರಟ ವಿದ್ಯಾರ್ಥಿಗೆ 'ಜನನಾಯಕ'ವನ್ನು ತಪ್ಪಿಸಿ ಮುಂದೆ ಹೋಗುವದು ತೀರ ಕಠಿಣ. ಅವನು ಒಂದೆಡೆಗೆ ಶ್ರೀಗಂಗರ, ಬೇಂದ್ರೆಯವರ, ಕೈಲಾಸಂರ ಹಾಗೂ ಕಾರಂತರ 'ಬಿತ್ತಿದ ಬೆಳೆ'ಯನ್ನು ಓದುವನು; ಇನ್ನೊಂದೆಡೆಗೆ ಶ್ರೀ. ಕಂದಗಲ್ಲರ, ಶ್ರೀ. ಶ್ರೀಕಂಠಶಾಸ್ತ್ರಿಗಳ, ಶ್ರೀ. ಕವಲಿಯವರ ನಾಟಕಗಳನ್ನು ಓದುವನು. ಇವೆರಡರ ಮಧ್ಯವರ್ತಿಯಾದ ಸಂಪ್ರದಾಯವು ಕನ್ನಡದಲ್ಲಿ ಇಲ್ಲವಲ್ಲ, ಎಂದು ಗೊಣಗಾಡುವಾಗ ಶ್ರೀ. ವಿನಾಯಕರ 'ಜನನಾಯಕ'ವು ಅವನಿಗೆ ಕೆಲವು ಮಟ್ಟಿಗೆ ಸಮಾಧಾನವನ್ನು ಕೊಡುವದು. ಮುಂಬರುವ ನಾಟಕಕಾರರಿಗೆ ಅವನು ಜನನಾಯಕದತ್ತ ಬೊಟ್ಟುಮಾಡಿ 'ಇದೂ ಒಂದು ಮಾರ್ಗವಿದೆ' ಎಂದು ಕೈ ತೋರಿಸುವನು.

ಒಂದೇ ಇಂಥ ನಾಟಕವು ಈ ಮಧ್ಯವರ್ತಿ ಸಂಪ್ರದಾಯವನ್ನು ಹುಟ್ಟಿಸಲು ಅಸಮರ್ಥವಾದದ್ದು. ಇಂಥ ಹಲವಾರು ನಾಟಕಗಳಾದರೂ ಹುಟ್ಟಿ, ಸಾಹಿ

ತ್ರಿಕ ನಾಟಕಗಳ ಹಾಗೂ ಸಂಪ್ರದಾಯಿಕ ‘ಕಂಪನಿ’ನಾಟಕಗಳ ಮಧ್ಯವ
ಯಾದ ಸಂಪ್ರದಾಯವನ್ನು ಹುಟ್ಟಿಸುವದು ಕನ್ನಡ ರಂಗಭೂಮಿಯ ದೃ
ಯಿಂದ ಅತ್ಯವಶ್ಯವಾಗಿದೆ. ಕನ್ನಡ ರಂಗಭೂಮಿಯು ಇನ್ನೂ ತನ್ನ ಎಳೆಯ ಅ
ಯಲ್ಲಿಯೇ ಸಿನೇಮಾಗಳೊಡನೆ ಆರ್ಥಿಕ ಹಾಗೂ ಮನೋರಂಜನಾತ್ಮಕ ಸ್ಪ
ಬೀಳಬೇಕಾಗಿ ಬಂದು ತನ್ನ ಬೆನ್ನೆಲವನ್ನು ಮುರಿದುಕೊಂಡಿದೆ. ಸಾಹಿತ್ತಿಕನಾ
ಗಳು ಕನ್ನಡ ಜನತೆಯ (ಅಂದರೆ ಸುಶಿಕ್ಷಿತನಿಂದ ಹಿಡಿದು ಅಶಿಕ್ಷಿತನ ವರೆಗೆ ಇರ
ಜನಜಂಗುಳಿಯ) ಹೃದಯದ ಮೇಲೆ ಯಾವ ವಿಶೇಷ ಪರಿಣಾಮವನ್ನೂ ಮಾ
ಎಂಬ ಮಾತಿಗೆ ಸಾಹಿತ್ತಿಕನಾಟಕಗಳಿಗಿಂತ ‘ಕಂಪನಿ’ನಾಟಕಗಳೇ ಇನ
ಅಲ್ಲಲ್ಲಿ ನಡೆಯುತ್ತಿದ್ದುದೇ ನಿದರ್ಶನ. ಸಾಹಿತ್ತಿಕ ನಾಟಕವು ಇನ್ನೂ ತ
‘ವಿಲಾಸಿ’ ಅವಸ್ಥೆಯನ್ನು ಮೀರಿಲ್ಲ. ಅದರ ಪ್ರದರ್ಶನಗಳೂ ತೀರ ಬೆರ
ಎಣಿಸುವಷ್ಟು. ಹಲವಾರು ಉತ್ತಮೋತ್ತಮ ಸಾಹಿತ್ತಿಕನಾಟಕಗಳು ಹು
ಬಂದು ತಮ್ಮದೇ ಆದ ಸುಂದರ ಸಂಪ್ರದಾಯವನ್ನು ನಿರ್ಮಿಸಿದುದು ಕನ್ನಡಿ
ಸುದೈವ. ಆದರೆ ನಾಟಕಕಾರರು ತಮ್ಮ ಮೂಲ ನೆಲವಾದ ‘ಕಂಪನಿ’ನಾ
ವನ್ನು ಹೊಕ್ಕು ಅದರ ಆಟಿಗೆಗಳನ್ನೇ ಉಪಯೋಗಿಸಿ ಹೊಸ ಜೀವವನ್ನು
ರಲ್ಲಿ ತುಂಬುವ ಕೆಲಸವಾಗದಿದ್ದರೆ, ಕನ್ನಡಿಗರು ಒಂದು ದೊಡ್ಡ ಸಂಧಿಯ
ಕಳೆದುಕೊಂಡಂತಾಗುತ್ತದೆ. ಎಂ. ಪೀರ, ಸಿದ್ರಾಮಪ್ಪ, ಮುಂತಾದ ಉತ್ತ
ನಟರ ನಟನೆಯನ್ನು ನೋಡಿ ರಂಜಿಸಿದ ಕನ್ನಡ ಹಳ್ಳಿಗರ ಪೀಳಿಗೆ ದಾ
ಹೋಗುವ ಮುನ್ನವೇ ಈ ಕೆಲಸವಾಗಬೇಕಾಗಿದೆ. ಇದಲ್ಲದೆ ಯಕ್ಷಗಾನ, ಬ
ಲಾಟ ಮುಂತಾದ ನಮ್ಮ ಸಂಪ್ರದಾಯಗಳಾದರೂ ಕನ್ನಡ ನಟ ಪ್ರೇಕ್ಷಕರ
ಇದೇ ಸಂಪ್ರದಾಯಕ್ಕೆ ಅಣಿಮಾಡಿರುತ್ತವೆ. ಈ ಸಂಪ್ರದಾಯವು ಆವಿ
ಪ್ರಯೋಗಕ್ಕೆ ಹೆಚ್ಚು ಸಮೀಪವೂ ಆಗಿರುತ್ತದೆ. ಇನ್ನು ಐವತ್ತು ವರ್ಷಗಳ
ಈ ಸಂಪ್ರದಾಯವು ಹುಟ್ಟಿಕೊಳ್ಳದಿದ್ದರೆ, ಸಿನೇಮಾ ಹಳ್ಳಿಹಳ್ಳಿಗೆ ಹೊ
(ಜೋಗ ಇಲೆಕ್ಟ್ರಿಸಿಟಿ ಈಗಾಗಲೆ ಹೊಕ್ಕಿದೆ) ಇದ್ದ ಕಚ್ಚಾ ಮಾಲನ್ನೂ ಕೊ
ಹಾಕುವ ಸಂಭವವುಂಟು.

ಶ್ರೀ. ವಿನಾಯಕರು ಈ ವಿಷಯವನ್ನು ‘ಜನನಾಯಕ’ವನ್ನು ಬರೆದಾ
ಅರಿತಿದ್ದರು. ತಮ್ಮ ಮುನ್ನುಡಿಯಲ್ಲಿ ತಾವು ಕಂಪನಿಸಂಪ್ರದಾಯವನ್ನೂ ಸಾ
ತ್ತಿಕ ಸಂಪ್ರದಾಯವನ್ನೂ ಒಂದುಗೂಡಿಸಿ ಸಾಮಾಜಿಕ ಅವಿದ್ಧಪ್ರಯೋಗವನ

ರಚಿಸಿದ್ದಾಗಿ ತಿಳಿಸಿದ್ದಾರೆ. ಇದಕ್ಕೆ ಶೆಕ್ಸಪಿಯರನ ಮಾರ್ಗವೆಂದು ಅವರು ಕರೆದಿದ್ದಾರೆ. ಆದರೆ ಅವರು ಇದೇ ಮಾರ್ಗದಲ್ಲಿ ಏಕೆ ಮುಂದುವರಿದಿಲ್ಲವೆಂಬುದೇ ಸೋಜಿಗವಾಗಿದೆ. 'ವಿಮರ್ಶಕವೈದ್ಯ' ಹಾಗೂ 'ಯುಗಾಂತರ'ಗಳು ತೀರ ಸಾಹಿತ್ತಿಕ ಮಾರ್ಗಕ್ಕೆ ಇಳಿದಿವೆ. ಇಂಥ ನಾಟಕಗಳು ಇರಬಾರದೆಂದಲ್ಲ. ಆದರೆ ಹಸಿರಿದ್ದಲ್ಲಿ ಅರ್ಧ ಬಾವಿ ತೋಡಿ ಅಷ್ಟಕ್ಕೆ ಬಿಟ್ಟುಬಿಟ್ಟಂತೆ ಈಗ ಹಾಡಾಗಿದೆ. ಕನಿಷ್ಠಪಕ್ಷಕ್ಕೆ ಇತರರಾದರೂ ಇದೇ ಮಾರ್ಗವನ್ನು ಅನುಸರಿಸುವದು ವಿಹಿತ ವಾಗಿದೆ.

ಕನ್ನಡದಲ್ಲಿ ಸಾಮಾಜಿಕ ಆವಿದ್ಧಪ್ರಯೋಗಗಳು ಕಡಿಮೆ. ಶ್ರೀರಂಗರು ಬರೆದ ನಾಟಕಗಳು ಆವಿದ್ಧಪ್ರಯೋಗಗಳಲ್ಲ; ಅವನ್ನೂ ಮೀರಿದ ಸಂಕಟ ಸಂತಾಪ ದಲ್ಲಿ ಬರೆದ 'Too sad for tears' ನಾಟಕಗಳು. 'ಅವಡುಗಚ್ಚಿದ ನಗೆಯು' ಜೀವಂತ ನಿದರ್ಶನಗಳಾಗಿವೆ. ಬೇಂದ್ರೆಯವರ 'ಉದ್ಧಾರ' ವಿಪುಲವಾಗಿ, ಕೈಲಾ ಸಂರ 'ಸೂಳೆ' ಇನ್ನೊಂದು ಬಗೆಯಿಂದ ಆವಿದ್ಧಪ್ರಯೋಗಗಳ ಉದಾಹರಣೆಗಳು. ಬೇಂದ್ರೆಯವರ 'ಉದ್ಧಾರ'ವು ವಿನಾಯಕರು ತಮ್ಮ ಮುನ್ನುಡಿಯಲ್ಲಿ (ಕೋಲ್ಮಿಂಚು) ಕೇಳಿದ ಹನ್ನೆರಡು ಪ್ರಶ್ನೆಗಳಲ್ಲಿ ಒಂದನ್ನು ಬಿಡಿಸಿದೆ. 'ಆವಿದ್ಧ ಪ್ರಯೋಗಕ್ಕೆ ಗ್ರಾಂಥಿಕಭಾಷೆಯೇ ಇರಬೇಕೇ?' 'ಉದ್ಧಾರ'ವು ಅದಕ್ಕೆ ಕೊಡುವ ಉತ್ತರ, 'ಕಾರಣವಿಲ್ಲ.!' ಎಂದಿಷ್ಟೇ. ಆದರೆ ನಾಟಕ 'Tragic' ಅಷ್ಟೇ ಅಲ್ಲ, 'Heroic' ಇದ್ದಾಗ, ನಾಟಕಕಾರನಿಗೆ ಸಭ್ಯಭಾಷೆಯೇ ಬೇಕಾದಾಗ, ಏನು ಮಾಡಬೇಕೆಂಬ ಸಮಸ್ಯೆಯನ್ನು ವಿನಾಯಕರು 'ಜನನಾಯಕ'ದಲ್ಲಿ ಬಿಡಿಸಲು ಯತ್ನಿಸಿದ್ದಾರೆ. ಅವರ ಉತ್ತರಕ್ಕಿಂತ ಅವರ ಪ್ರಶ್ನೆ ಹೆಚ್ಚು ಮಹತ್ವದ್ದು. ಎಲ್ಲ ಕಡೆಗೂ ಸಮನಾದ ಯಶಸ್ಸನ್ನು ಅವರು ಪಡೆದಿದ್ದಾರೆಂದು ನಾನು ಹೇಳುವದಿಲ್ಲ. ಉದಾಹರಣೆಗಾಗಿ ಒಂದು ಪಾತ್ರವು ಮೊದಲಿನಿಂದ ಕೊನೆವರೆಗೂ ಗ್ರಾಮ್ಯ ಪ್ರಯೋಗಗಳನ್ನೇ ಉಪಯೋಗಿಸುತ್ತ ಬಂದು ಕೊನೆಯ ದೃಶ್ಯದಲ್ಲಿ ಒಮ್ಮೆಲೇ ವ್ಯಾಕರಣಪೂರ್ಣ ಭಾಷೆಯನ್ನು ಆಡತೊಡಗುತ್ತದೆ. ಉದಾ: ಪುಟ ೧೨೫. ಇದೇ ಪಾತ್ರವು ದೇಸಾಯರಿಂದ ಅವಮಾನಗೊಳ್ಳುವಾಗ (೨ ಅಂಕ, ೩ನೆಯ ದೃಶ್ಯ) ಮೊದಲು ಗ್ರಾಮ್ಯವಾಡಿ ಗಂಗಜ್ಜನನ್ನು ಆಲಿಂಗಿಸುವಾಗ ಒಮ್ಮೆಲೆ ವಾಕ್ಪಟುತ್ವವನ್ನು ವ್ಯಕ್ತಗೊಳಿಸುತ್ತದೆ. ಭೀಮಣ್ಣನಾಯಕನ ಕೆಲವು ಮೊದಲಿನ ಭಾಷಣಗಳು 'ಪರ್ಸಿಹಾಟ್‌ಸ್ಪರ್'ನಂತೆ ಕರ್ಣಗೋಚರವಾಗಿ, ಧೀರೋದಾತ್ತತೆ

ಗಿಂತ 'ತಲೆತಿರುಕತನ'ದಂತೆ ಭಾಸವಾಗುತ್ತವೆ. ಜನ ಭೀಮಣ್ಣನನ್ನು ಕುರಿ
'ನೀನೇ ನಮ್ಮ ನಾಯಕ, ನೀನೇ ನಮ್ಮ ನಾಯಕ'ಎಂದು ಕೂಗುವಾಗ ಅಕನ್ನ
ಅಭಾರತೀಯ ವಾತಾವರಣ ಗೋಚರವಾಗಿ ಶೇಕ್ಸಪಿಯರನ ಜನಜಂಗುಳಿ
ನೆನಪನ್ನು ತಂದುಕೊಡುತ್ತವೆ. ಆದರೆ ಇಂಥ ಐವತ್ತುದೋಷಗಳನ್ನು ಮರೆಯ
ಬಿಡುವ ಕೆಲವೇ ಯಶಸ್ಸುಗಳನ್ನು ನೆನೆದರೆ, ಶ್ರೀ. ವಿನಾಯಕರು ಕನ್ನಡಿಗ
ಮಾಡಬೇಕಾದ ನ್ಯಾಯದಾನದ ವಿಷಯವು ಮನವರಿಕೆಯಾಗುತ್ತದೆ.
ಯನು ಮಾಡಿದ ಕೊನೆಯ ಭಾಷಣ, ೪ನೆಯ ಅಂಕಿನ ೨ನೆಯ ಚಿಕ್ಕ ದೃಶ್ಯದ
ಭೀಮಣ್ಣನಾಯಕನ ಹೆಂಡತಿ ಉದಯರಾಗವನ್ನು ಹಾಡಹೋಗಿ ಸಂಧ್ಯಾರಾ
ವನ್ನು ಹಾಡಿದುದು, ೨ನೇ ಅಂಕಿನ ೪ನೆಯ ದೃಶ್ಯದಲ್ಲಿ ಭೀಮಣ್ಣನ ತಾ
ಹೇಳಿದ ಅತಿ ರಸವತ್ತಾದ ಪೂರ್ವಕಥನ, ರಾಮಣ್ಣನ ಮರಣದೃಶ್ಯ, ಇ
ಹಲವಾರು ಸ್ಥಳಗಳಲ್ಲಿ ವಿನಾಯಕರು ಈ ಸಮಸ್ಯೆಯನ್ನು ಲೀಲಾಜಾಲವಾ
ಬಿಡಿಸಿದ್ದಾರೆ. ಇಂಥಲ್ಲಿ ಕನ್ನಡ ರುದ್ರನಾಟಕದ ಭವಿತವ್ಯವು ಓದುಗರಿಗೆ ಒಮ್ಮೆ
ನಿಚ್ಚಳವಾಗುತ್ತದೆ. ನಮ್ಮ ಕಡೆಯ ಗ್ರಾಮ್ಯಭಾಷೆಯನ್ನು ಗ್ರಾಂಥಿಕಭಾ
ಯೊಡನೆ ಸರಿಬೆರಸುತ್ತ ಒಮ್ಮೆ ಗ್ರಾಮ್ಯಭಾಷೆಯ ಕಾವ್ಯಮಯತೆಯನು
ಒಮ್ಮೆ ಗ್ರಾಂಥಿಕಭಾಷೆಯ ಶಕ್ತಿಯನ್ನು ಉಪಯೋಗಿಸುತ್ತ, ಬೇಕಾದ ಸಂದಭ
ವನ್ನು ಎದೆಗೊಳ್ಳಬಲ್ಲ ಶೈಲಿಯನ್ನು ವಿನಾಯಕರು ಬಹು ಕಷ್ಟಬಟ್ಟು ಕೈಗೂಡಿ
ಕೊಂಡಿರುವರು.

ಇದು ಮಹತ್ವದ ವಿಷಯ. ಪುನರುಜ್ಜೀವನ ಕಾಲದಲ್ಲಿ ಸ್ವಾಭಾವಿ
ಪ್ರತಿಭೆಗಿಂತ ಅಭಿಜಾತಪ್ರತಿಭೆಯು (Natural genius Vs Classic
genius) ಐತಿಹಾಸಿಕ ದೃಷ್ಟಿಯಿಂದ ನವಯುಗನಿರ್ಮಾಣಕ್ಕೆ ಅನೇಕ ಬಾ
ಹೆಚ್ಚಿಗೆ ಸಹಾಯಕಾರಿಯಾಗುತ್ತದೆ. 'ಯುನಿವ್ಹರ್ಸಿಟಿ ವಿಟ್ಸ' ಬಿತ್ತಿದ ಬೀ
ವನ್ನು ಶೇಕ್ಸಪಿಯರನು ಬೆಳಿಸಿ ಲೂಟಿ ಮಾಡಿದನು. ಅವರು ಅಸಹಜ ರ
ವನ್ನು ಇಂಗ್ಲಿಷಿಗೆ ತಂದು ಎರೆಯದೆ ಇದ್ದರೆ ಮುಂಬರುವ ಲೇಖಕರು ಅದನ್ನ
ಇಂಗ್ಲಿಷಿಗೆ ಸಮರಸಗೊಳಿಸಿ ಹೊಸ ಜೀವನವನ್ನು ನಿರ್ಮಿಸುವ ಕಾರ್ಯ
ಆಗುವದು ಕಠಿಣವಾಗುತ್ತಿತ್ತು. ನಾನು ಮೇಲೆ ಎತ್ತಿ ತೋರಿಸಿದ ಜನನಾಯಕ
ದೋಷಗಳಾದರೂ ಮಡಿಬೊಕ್ಕೆಗಳಂತೆ ಹೊಸ ಆರೋಗ್ಯದ ಲಕ್ಷಣಗಳಾಗಿ
ತುಸುವೆ ವಿಚಾರ ಮಾಡಿದರೆ, ಇಂಥ ದೋಷಗಳು ವಿನಾಯಕರ ಪ್ರಥಮ ನಾಟ

ದಲ್ಲಿ ಆಗಿರುವದು ಅವರ ಅಭಿಜಾತ ಪ್ರಯತ್ನದ ಮೂಲಕವೇ. ಅಭಿಜಾತ ಲೇಖಕನು ಪೂರ್ವಸಿದ್ಧ ಅನುಭವದೊಡನೆ ಭಾಷೆಯ ಮೇಲೆ ದಾಳಿಮಾಡುತ್ತಾನೆ. ಪಡುವಲಬಳ್ಳಿಗೆ ಕಾಯಿ ಬಿಟ್ಟಲ್ಲೆಲ್ಲ ಒಂದೊಂದು ಕಲ್ಲನ್ನು ಕಟ್ಟುತ್ತಾರೆ. ಬಳ್ಳಿಗೇನೋ ಅದೊಂದು ಹೊರಲಾರದ ಭಾರ. ಆದರೆ ಆ ಭಾರದ ಮೂಲಕವೇ ಕಾಯಿಗಳು ಉದ್ದವಾಗಿ ಬೆಳೆಯಬಲ್ಲವು. ಅಭಿಜಾತ ಲೇಖಕನು ತನ್ನ ಪೂರ್ವಸಿದ್ಧ ಅನುಭವವನ್ನು ಇನ್ನೂ ತ್ರಾಣವಿಲ್ಲದ ಭಾಷೆಯ ಮೇಲೆ ಮೊದಲು ಬಾರಿ ಹೇರಿದಾಗ, ಬಳ್ಳಿ ಬಾಗಿ, ಒಮ್ಮೊಮ್ಮೆ ಹಂದರವನ್ನು ಬಿಟ್ಟು ಇಳಿಯುವದುಂಟು. ಮತ್ತೆ ಮತ್ತೆ ಹಂದರಕ್ಕೇರಿಸಿ ಅದರ ಮೇಲೆ ತನ್ನ ಅನುಭವವನ್ನು ಮೇಲಿಂದ ಮೇಲೆ ಹೇರಿ, ಬಳ್ಳಿಯನ್ನೂ ಬಲಕಟ್ಟುಗೊಳಿಸುವದು ಅವಶ್ಯಕ. ಅದೇನೇ ಆಗಲಿ, ಸ್ವಾಭಾವಿಕ ಅನುಭವವನ್ನು ಸ್ವಾಭಾವಿಕವಾಗಿ ಹೇಳಿ, ಕಡಲೆ ತಿಂದು ಕೈತೊಳೆದು ಕೊಳ್ಳುವ ಸ್ವಾಭಾವಿಕ ಕಲಾವಿದನಿಗಿಂತ, ಕಷ್ಟಪಟ್ಟು, ಮುಳ್ಳು-ಕಂಟಿ ಎಡವಿ, ಎರಡು ಬಾರಿ ಸೋತು, ಎರಡು ಬಾರಿ ಗೆಲ್ಲುವ ಅಭಿಜಾತಕಲಾವಿದನು ಐತಿಹಾಸಿಕ ದೃಷ್ಟಿಯಿಂದ ಹೆಚ್ಚು ಮಹತ್ವವುಳ್ಳವನು. ಅವನ ಪ್ರಯೋಗಗಳು ಮುಂಬರುವ ಲೇಖಕರ ಪೀಳಿಗೆಗೆ ಹೊಸ ರಕ್ತದಾನವನ್ನು ಮಾಡುತ್ತವೆ. ಹೊಸ ಸಂಭಾವ್ಯತೆಗಳನ್ನು ಭಾಷೆಗೆ ಉಂಟುಮಾಡುತ್ತವೆ.

ಸುದೈವದಿಂದ ವಿನಾಯಕರು ಒಂದೇ ಆದರೂ, ಇಂಥ ಪ್ರಯತ್ನವನ್ನು ಮಾಡಿದ್ದಾರೆ. ಅದು ಹೇಗೇದರೆ, ಅವರು ಅನೇಕ ದೃಷ್ಟಿಯಿಂದ Shakespearean. ಅವರು ವಿನಯದಿಂದ, ತಾವು ಸದ್ಯಃಕಾಲೀನ ಕಂಪನಿ ನಾಟಕ ಸಂಪ್ರದಾಯದಲ್ಲಿ ಸಾಹಿತ್ಯಕತೆಯನ್ನು ತುಂಬಲು ಯತ್ನಿಸಿಗುವ ಅರ್ಥದಲ್ಲಿ ತಮ್ಮ ರೀತಿ ಶೇಕ್ಸಪಿಯರನ ರೀತಿ, ಎಂದು ಹೇಳಿಕೊಂಡಿದ್ದಾರೆ. ಆದರೆ ಇನ್ನೊಂದು ಅರ್ಥದಲ್ಲಿ, ಅನುಭವದ ಅರ್ಥದಲ್ಲಿಯಾದರೂ ಅವರು ಶೇಕ್ಸಪೀಯರ್ ಇದ್ದಾರೆ. ಅದು ವಿನಾಯಕರ ಹೆಚ್ಚಿನ ಮಹತಿ. ತಮ್ಮ ಶೇಕ್ಸಪಿಯರ ಅಭ್ಯಾಸದ ಪರಿಪಾಕವನ್ನೂ, ವಿಶಿಷ್ಟಾನುಭವವನ್ನೂ ಕಂಪನಿ ನಾಟಕ ರೀತಿಯಲ್ಲಿ ತುಂಬಿ ಹೋದದ್ದು ಕನ್ನಡ ನಾಟಕ ಸಂಪ್ರದಾಯಕ್ಕೆ ಹೊಸತು. ಶೇಕ್ಸಪಿಯರನ ವಿಶಿಷ್ಟಾನುಭವವನ್ನು ಕುವೆಂಪು ಅವರು ವಾಙ್ಮಯೀನ ಸರಳರಗಳೆಯಲ್ಲಿ ಭಾವಾನುವಾದ ರೀತಿಯಿಂದ ಮಾಡಿದುದು ಒಂದು ರೀತಿ. ಆದರೆ ಅದು ಮೊದಲು ಹೇಳಿದ ಶೇಕ್ಸಪಿಯರ ರೀತಿಯಲ್ಲ; ನಿರಂಕುಶಮತಿಯಾದ ಕವಿಯ ರೀತಿ; ಹಾಲಿಲ್ಲದಿದ್ದರೂ, ಬಟ್ಟಲಿಲ್ಲದಿದ್ದರೂ

ಕಾಮಧೇನುವನ್ನೇ ಹಿಂಡಿ 'ಗುಟುಕ್' ಎನ್ನುವ ರೀತಿ. ನನಗೆ ತಿಳಿದ ಮಟ್ಟ
ಕನ್ನಡದಲ್ಲಿ ಶೆಕ್ಸಪಿಯರಾನುಭವವನ್ನು ವಿನಾಯಕರ ರೀತಿಯಲ್ಲಿ ಇನ್ನಾ
ಮಾಡಿಲ್ಲ. ಶ್ರೀ. ಅಂಬಿಕಾತನಯದತ್ತರು 'ಉದ್ಧಾರ'ದಲ್ಲಿ, ಪ್ರಯತ್ನ ಮಾಡಿ
ತಮ್ಮ ಸ್ವಾಭಾವಿಕ ಪ್ರತಿಭೆಯಿಂದ ಇಂಥ ಕೆಲಸವನ್ನು ಮಾಡಬಲ್ಲರೆಂಬ ವಿಶ್ವಾ
ವನ್ನು ಹುಟ್ಟಿಸುತ್ತಾರೆ. ಆದರಲ್ಲಿಯ Intrigue ಭಾಗವನ್ನೂ, ಕೊನೆಗೆ ದೇ
ಲಯದಲ್ಲಿ ಸುಧಾರಕರು ಹಾವನ್ನು ಕಾಣುವ ಭಾಗವನ್ನೂ ಈ ವಿಷಯದ
ನೆನೆದುಕೊಳ್ಳಬಹುದು. ಆದರೆ ಒಟ್ಟಿನ ಮೇಲೆ 'ಉದ್ಧಾರ'ವು ಶೇಕ್ಸಪಿಯರೀ
ಪ್ರಯೋಗವಲ್ಲ. ಅಲ್ಲದೆ ಈ ದೃಶ್ಯಗಳು ಉದ್ದೇಶಪೂರ್ವಕವಾಗಿ ಶೇಕ್ಸಪಿ
ರೀಯವಾದವುಗಳೂ ಅಲ್ಲ. ಉದ್ದೇಶಪೂರ್ವಕವಾಗಿ ಶೇಕ್ಸಪಿಯರೀಯ ಕಂ
ನಾಟಕವನ್ನು ಬರೆದವರು ವಿನಾಯಕರೊಬ್ಬರೇ ಎಂದೂ, ಆ ದೃಷ್ಟಿಯಿಂದ ಅ
ಜಾತ ಲೇಖಕರು ಮಾಡಬಲ್ಲ ಐತಿಹಾಸಿಕ ಕೆಲಸವನ್ನು ಅವರು ಮಾಡಿದ್ದಾರೆಂ
ತತ್ಸಮಪ್ರತಿಭೆಯುಳ್ಳ ಇತರ ನಾಟಕಕಾರರು ಅದರ ಗುಣದೋಷಗಳಿಂದ ಪಾ
ಕಲಿತುಕೊಂಡು ಆ ಸಂಪ್ರದಾಯವನ್ನು ಮುಂದುವರಿಸಿದರೆ, ಪುನರುಜ್ಜೀ
ಕಾಲೀನ ನಮ್ಮ ಕನ್ನಡವು ಉಚ್ಚತಮ ರುದ್ರನಾಟಕಸಂಪ್ರದಾಯವನ್ನು ಹು
ಸಲು ಸಮರ್ಥವಾದೀತೆಂದೂ ಈ ಲೇಖಕನು ಸೂಚಿಸುತ್ತಾನೆ.

ಇನ್ನು ವಿನಾಯಕರು ಶೇಕ್ಸಪಿಯರಾನುಭವವನ್ನು ಕನ್ನಡಕ್ಕೆ ನೀಡು
ಯತ್ನವನ್ನು ಮಾಡಿರುವರೇ ಎಂದು ಓದುಗರು ಸಂಶಯಪಡಬಹುದು. ಹೌ
ಎಂದು ನನ್ನ ಅಭಿಪ್ರಾಯ. ಈಗಾಗಲೆ ಶೇಕ್ಸಪಿಯರನ ಸೌರಭವುಳ್ಳ ಎರ
ಉದಾಹರಣೆಗಳನ್ನು ಹೇಳಿದ್ದೇನೆ. ಆದರೆ ಇದಲ್ಲದೆ ಇನೇಕ ಉದಾಹರಣೆಗ
ಸಿಕ್ಕುತ್ತವೆ. ಭೀಮಣ್ಣನ ಮೊದಲಿನ ಕೆಲವು ಎದೆಗಾರಿಕೆಯ ಮಾತುಗಳ
ಅವನ ಹೆಂಡತಿ ಹಾಗು ತಾಯಿಯ ಸ್ವಭಾವಗಳೊಡನೆ ಜೋಡಿಸಿದರೆ, ಶೇಕ್ಸ
ಯರನ 'ಕೊರಿಯೊಲ್ಯಾನಸ್' ನಾಟಕದ ನೆನಪಾಗುತ್ತದೆ. 'ನೀನೇ ನ
ನಾಯಕ'ನೆಂದು ಕೂಗುವ ಜನಜಂಗುಳಿಯೆದುರು ಭೀಮಣ್ಣನಾಯಕ ಮಾ
ಭಾಷಣವು 'ಜ್ಯೂಲಿಯಸ್ ಸೀಝರ' ನಾಟಕದ ನಡುವೆ ಪಡಿನೆಳಲನ್ನು ಪ
ದಿದೆ. ಹಣಮಪ್ಪದೇಸಾಯರು ಕೆಲವು ಕಡೆಗೆ ಎರಡನೆಯ ರಿಚರ್ಡನ
ಹೋಲುತ್ತಾರೆ. ಆದರಲ್ಲಿಯೂ ವಿಶೇಷತಃ ರಾಮಣ್ಣನವರು ಸಾಯಲು ಬಿ
ಗಂತೂ ಈ ಹೋಲಿಕೆ ಹೆಚ್ಚಾಗುತ್ತದೆ. ಆಗ ರಾಮಣ್ಣನವರು 'ಜಾ:ನ್ ಅ

ಗಾ:ಂಟ್'ನಂತೆ ಒಂದೆರಡು ಮಾತು ಆಡುತ್ತಾರೆ. 'ಸಾಯುವವನ ನಾಲಿಗೆಯ ಮೇಲೆ ಸತ್ಯವೇ ಕುಳಿತಿರುವದಂತೆ' ಆ ಇಡಿಯ ದೃಶ್ಯವೇ ಶೇಕ್ಸಪಿಯರನ 'ರಿಚರ್ಡ ಸೆಕೆಂಡ'ದ ನೆನಪುಗಳನ್ನು ಮೇಲಿಂದ ಮೇಲೆ ಕೊಡುತ್ತದೆ.

ಆ ಸುಂದರ ದೃಶ್ಯದ ಬಗ್ಗೆ ಇನ್ನಷ್ಟು ಕೂಲಂಕಷವಾಗಿ ವಿಚಾರ ಮಾಡಿದರೆ, ವಿನಾಯಕರ ಯಶಸ್ಸಿನ ಯಥಾರ್ಥತೆ ಮನವರಿಕೆಯಾಗದಿರದು. ಅದರಲ್ಲಿಯೂ ರಾಮಣ್ಣನು ಸಾಯುವಾಗ ಮಾಡಿದ ಭಾಷಣವು ಕಾವ್ಯಮಯವೂ ಮನೋವೇಧಕವೂ ಆಗಿದೆ. ಆ ಭಾಷಣದಲ್ಲಿ ಇಂಥ ಶೇಕ್ಸಪಿಯರ್ ಕಂಪನಿ ಸಂಪ್ರದಾಯ ಮಿಲನದ ಸತ್ಯವಾದ ಭವಿತವ್ಯವು ಒಡಮೂಡಿದೆ. ಅದನ್ನು ಓದಿದವರಿಗೆ ಒಮ್ಮೆಲೆ ಇಂಥ ಸುಷ್ಟುಸಂಪ್ರದಾಯವು ನಮ್ಮಲ್ಲಿ ಬೆಳೆದರೆ ನಮ್ಮ ನಾಟಕಸಂಪ್ರದಾಯದ ಬಣ್ಣವೇ ಬದಲಾಗುವದೆಂದು ತಟ್ಟನೆ ಹೊಳೆಯುವದು. ಜೊತೆಗೆ ಅದು ಬೆಳೆಯುವದು ಅಸಾಧ್ಯವೇನೂ ಅಲ್ಲ, ಅದರ ಬದಲು ಸ್ವಾಭಾವಿಕವೇ, ಎಂಬ ಭಾವನೆಯೂ ಬರುವದು. ಈ ದೃಶ್ಯವು ಅನೇಕ ರೀತಿಯಿಂದ ವಿನಾಯಕರ ನಾಟಕಕಲೆಯ ಉಚ್ಚತಮ ಯಶಸ್ಸೆಂದರೆ ಅತಿಶಯೋಕ್ತಿಯಾಗದು.

ಜನನಾಯಕದ ವಿಷಯದಲ್ಲಿ ನನಗೆ ಹೇಳಬೇಕಾದುದೆಲ್ಲ ಹೇಳಿಯಾಯಿತು. ಇನ್ನು ಮುಂದೆ ಹೇಳಬೇಕಾದದ್ದು ವಿಮರ್ಶಕನ ಕೆಲವು ವ್ಯರ್ಥ ಹೊಣೆಯನ್ನು ತೀರಿಸಲೆಂದಿಷ್ಟೇ. 'ಜನನಾಯಕ'ವು ಪುನರ್ಮುದ್ರಿತವಾಗುವ ಪ್ರಸಂಗ ಬಂದರೆ (ಬಂದೀತೆಂದು ನನ್ನ ಆಸೆ) ಅದು ತನ್ನ ಐತಿಹಾಸಿಕ ಹೊಣೆಗಾರಿಕೆಯನ್ನು ಅನುಲಕ್ಷಿಸಿಕೊಂಡು ತನ್ನಲ್ಲಿರುವ ಕೆಲವು ತೀರ ತಾಂತ್ರಿಕವಾದ ಕೊರತೆಗಳನ್ನುತುಂಬಿಕೊಳ್ಳಬೇಕಾದದ್ದು ಅವಶ್ಯಕ. ಆ ಕೊರತೆಗಳು ಯಾವವೆಂಬುದನ್ನು ನಿರ್ಣಯಿಸುವ ಅಧಿಕಾರ ವಿನಾಯಕರದೇ ನಿಜ. ಆದರೆ ಅನುಮಾನಬಡುತ್ತ ನಾನು ಕೆಲವು ಸೂಚನೆಗಳನ್ನು ಮಾಡುತ್ತೇನೆ. ಅವು ತಪ್ಪಾಗಿದ್ದರೆ ನನ್ನ ಅನನುಭವದ ಲಕ್ಷಣಗಳೇ ಹೊರತು ಇನ್ನೇನೂ ಅಲ್ಲ.

ನಾಟಕವನ್ನು ಇನ್ನೂ ಹೆಚ್ಚು ಉದ್ದೇಶಪೂರ್ವಕವಾಗಿ ಶೇಕ್ಸಪಿಯರೀಯ ಮಾಡಿದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ. ರಾಮಣ್ಣನ ಮರಣದ ದೃಶ್ಯವನ್ನು ಸವಿಯುವಾಗ ಕೂಡ ನನಗೆ, ಇಂಥ ವೀರಶ್ರೀಯುಕ್ತ (Heroic) ದೃಶ್ಯವು ಆಧುನಿಕ ಕಾಲದಲ್ಲಿ ತುಸು ಅಸ್ವೈಜವೆನಿಸಿತು. ಈಗಿದ್ದ ಸ್ಥಿತಿಯಲ್ಲಿ ರಾಮಣ್ಣನ ಸಾವನ್ನಾಗಲಿ ನಾಟಕದ ಕೊನೆಯನ್ನಾಗಲಿ'A Shakespearean Triumph'

ಎಂದೂ, ಲಕ್ಷ್ಮಮ್ಮನು ಹೇಳುವ ಪೂರ್ವಕಥನವು 'Triumph
Realism' ಎಂದೂ, ಸುಭದ್ರಾಬಾಯಿಗೆ ಆಗುವ ಅಪಶಕುನಗಳು 'Trium
of Conventional Company Technique' ಎಂದೂ ನಾವು ಬೇರೆ
ಯಾಗಿ ಹೇಳಬೇಕಾಗುತ್ತದೆ. ಅವೆಲ್ಲವನ್ನೂ ಒಂದುಗೊಳಿಸುವ 'Solven
ಅಭಾವವು ಗೋಚರವಾಗುತ್ತದೆ. ನಿಜವಾಗಿ ನೋಡಿದರೆ ಇಡಿಯ ಜನನಾ
ನಾಟಕವೇ ಐತಿಹಾಸಿಕ ನಾಟಕವಾಗಿದ್ದರೆ, ಈ ಸಮಸ್ಯೆಯನ್ನು ಲೇಖ
ಹಗುರಾಗಿ ಬಿಡಿಸಿಬಿಡುತ್ತಿದ್ದರು. ಆಧುನಿಕ ಹಿನ್ನೆಲೆಯಿದ್ದ ಮೂಲಕ ನಾಟ
ಲೇಖಕರಿಗೆ ಅನೇಕ ಕಡೆಗೆ ಚಿತ್ತವ್ಯಗ್ರತೆಯನ್ನು ಉಂಟುಮಾಡಿದೆ. ಶೇಕ್ಸಪಿ
ರೀತಿ, ಕಂಪನಿ ರೀತಿಯೊಂದಿಗೆ ಸಂಸ್ಕೃತನಾಟಕ ರೀತಿಯೊಂದು ಕೂಡಿಬಿ
ಈ ಸಮಸ್ಯೆ ಈಗಿನಕಿಂತ ಹಗುರಾದೀತೆಂದು ನನ್ನ ಅಭಿಪ್ರಾಯ. ಇದ
ಬಹಳ ವಿಶದೀಕರಿಸಹೋಗದೆ ಒಂದು ಉದಾಹರಣೆಯನ್ನು ಸೂಚಿಸುತ್ತೇ
ಭೀಮಣ್ಣನಾಯಕನು ಕಮಿಶನರರ ಎದುರಿಗೆ ಮಾಡಿದ ಭಾಷಣವಾಗಲಿ,
ಜಂಗುಳಿಯೆದುರು ಮಾಡಿದ ಭಾಷಣವಾಗಲಿ, ಬರಿಯ ಭಾವಾವೇಶಯ
ಭಾಷಣವೇ ಹೊರತು, ನಮ್ಮ ಹಳ್ಳಿಗರಲ್ಲಿ ಸ್ವಭಾವತಃ ತೋರಿಬರುವ ವ್ಯವ
ಚಾತುರ್ಯವನ್ನು ತೋರಿಸುವದಿಲ್ಲ. ಅದರ ಬದಲು ದೂತವಾಕ್ಯದಲ್ಲಿ ಕೃಷ
ತೋರಿಸುವ ಚಾತುರ್ಯವನ್ನಾಗಲಿ, ಕೃಷ್ಣಸಂಧಾನದ ಯಕ್ಷಗಾನ
ಕೃಷ್ಣ-ಧರ್ಮರಾಜ-ದುರ್ಯೋಧನರು ತಮ್ಮ ತಮ್ಮ ಪಕ್ಷದ ಸಮರ್ಥನೆಯ
ಧರ್ಮಶಾಸ್ತ್ರದ ಸಹಾಯದಿಂದ ಮಾಡುವ ರೀತಿಯನ್ನಾಗಲಿ ತಂದರೆ ನಾಟ
ಹೆಚ್ಚು Native ಆದೀತೆಂದು ನನ್ನ ವಿಚಾರ. ಇದೊಂದು ಹೊಳೆದ ಸೂ
ಯಷ್ಟೇ. ಈ ಸೂಚನೆ ವಿನಾಯಕರಿಗಾಗಿಯೇ ಅಲ್ಲ, ಸಂಪ್ರದಾಯನಿಮಾ
ದಲ್ಲಿ ಅಭಿರುಚಿಯುಳ್ಳವರಿಗೆ ಒಂದು Broad hint ಅಷ್ಟೇ.

ಇನ್ನು ಶ್ರೀ. ಬೇಂದ್ರೆಯವರು ಎತ್ತಿದ ವಿಷಯ. ಸಂಸ್ಥಾನದ ರಾಜ
ಣದ ವಿಷಯ. ಅದರಲ್ಲಿ ಕೆಲವು ಮಟ್ಟಿಗೆ Diffusion ಉಂಟು. ಭಾವನೆ
ವಸ್ತುವಿಗೆ ತಲೆಭಾರವಾಗಿದೆಯೋ ಏನೋ! ಇಷ್ಟೊಂದು ಜನಕ್ಷೋಭವೇ
ಕಾರಣವೇನು? ದೇಸಾಯರ ದಬ್ಬಾಳಿಕೆ. ಅಂದರೇನು? ದೇಸಾಯರು
ಮಕ್ಕಳ ಜೀವನ ಹಾಳುಮಾಡಿದರು. ಯಾವ ಹೆಣ್ಣುಮಕ್ಕಳದು? ಹೀಗೆ
ಕೇಳಿದೊಡನೆ ಒಮ್ಮೆಲೆ ನಾಟಕದಲ್ಲಿ Generalities ಆರಂಭವಾಗು

ಕ್ಷೋಭವೆದ್ದ ಮೇಲೆ ಏನಾಯಿತು? ಕವಿಃಶನರರಿಗೆ ಅರ್ಜ. Anticlimax ಎನಿಸುತ್ತದೆ. ಇಂಥ Generalities ಬದಲಾಗಿ ಒಂದೇ ಒಂದು ಗಟ್ಟಿ ಕಲ್ಲಾದ ಪ್ರಸಂಗದ ಸುತ್ತು ಇಡಿಯು ನಾಟಕ ತಿರುಗಿದ್ದರೆ ಸಂಸ್ಥಾನದ ರಾಜ ಕಾರಣದ ವಿಷಯದಲ್ಲಿ ಈ ಅಸ್ಪಷ್ಟತೆ ಹುಟ್ಟುತ್ತಿರಲಿಲ್ಲ. ಸಣತಮ್ಮನು ದುಷ್ಟ ಪಾತ್ರ. ಆದರೆ ಅವನ ದುಷ್ಟತನದ ಬಗ್ಗೆ ವಿನಾಯಕರಿಗೆ ಕರ್ಣೋಪಕರ್ಣಿ ಯಾಗಿ ಮುಟ್ಟಿದ ಸುದ್ದಿಗಳನ್ನು ಪುನರ್ನಿರ್ಮಾಣ ಮಾಡದೆ ನಾಟಕದಲ್ಲಿ ಹಾಕಿ ದಂತೆ ಇದೆ. ಆದ್ದರಿಂದ ಅವನ ದುಷ್ಟತನವೂ ಮನವರಿಕೆಯಾಗುವದಿಲ್ಲ. ತದ್ವಿರುದ್ಧವಾಗಿ ಮನೆಯಲ್ಲಿಯ ರಸವತ್ತಾದ ಸ್ತ್ರೀಪಾತ್ರಗಳು- ಜೀವನಕ್ಕೆ ಜೀವನವನ್ನೇ ಕಥೆ ಮಾಡಿದ ಲಕ್ಷ್ಮಮ್ಮ; ನಾಟಕದ ರುದ್ರತೆಯನ್ನೂ ತನ್ನ ಗರ್ಭಸ್ಥಶಿಶುವನ್ನೂ ಜೊತೆಜೊತೆಯಾಗಿ ಬೆಳೆಯಿಸುವ ಸುಭದ್ರಾಬಾಯಿ; ಎರಡರ ಬೆಳವಣಿಗೆಯ ಮೇಲೂ ಅವಳಿಗೆ ಉದ್ದೇಶಪೂರ್ವಕ ಅಧಿಕಾರವಿಲ್ಲ; ಅವಳ ಅಸ್ತಿತ್ವದ ಮೂಲಕ ಎರಡೂ ತಾವೇ ತಾವಾಗಿ ಬೆಳೆಯುತ್ತವೆ ಅಷ್ಟೆ, — ಇಂಥ ಪಾತ್ರಗಳೇ ಪ್ರೇಕ್ಷಕನಿಗೆ ನಿಜವಾದ ರುದ್ರನಾಟಕವೆಂದೆನಿಸುವದು ಸ್ವಾಭಾ ವಿಕ. ಜನನಾಯಕರಾರು? ಎಂಬ ಸಮಸ್ಯೆಯನ್ನು ಇಟ್ಟುಕೊಳ್ಳದೆ, ಗಂಡಸರಿ ಗಾಗಿ ಗಂಡಸರ ರುದ್ರನಾಟಕವುಂಟು; ಹೆಂಗಸರಿಗಾಗಿ ಹೆಂಗಸರ ರುದ್ರನಾಟಕ ವುಂಟು ಎಂಬುದಿಷ್ಟನ್ನೇ ತೋರಿಸುವ ಉದ್ದೇಶವನ್ನಿಟ್ಟುಕೊಂಡಿದ್ದರೆ ನಾಟಕವು ಸರ್ವಾಂಗದಲ್ಲಿ ಗಟ್ಟಿಯಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಮುನ್ನುಡಿಯಲ್ಲಿ ವಿನಾಯಕರು 'ಜನನಾಯಕ'ವು ಮೂಲ ಮೂರಂಕಿನ ನಾಟಕವಿತ್ತೆಂದೂ, ಬೆಳೆಯಿಸಿ ನಾಲ್ಕಂಕು ಮಾಡಿದರೆಂದೂ ಹೇಳಿದ್ದಾರೆ. ಅವರು ಬೆಳೆಯಿಸಿದ್ದು ಎಲ್ಲಿ ಎಂಬುದನ್ನು ತಿಳಿಯಲು ಮಾರ್ಗವಿಲ್ಲ. ಆದರೂ ಕಸಿಷ್ಟ ನಾಲ್ಕಾದರೂ ದೃಶ್ಯಗಳು ಯಾವ ನಾಟ್ಯೋದ್ದೇಶವನ್ನೂ ಪೂರೈಸುವದಿಲ್ಲ ವೆಂಬುದು ವಿಷಾದಕರ. ಆದರ ಬದಲು ನಾಟಕ ಇನ್ನೂ ಸಣ್ಣದೇ ಆದರೂ ಅಡ್ಡಿ ಇಲ್ಲ, surplusage ಕಡಿಮೆಯಾದಷ್ಟು ಒಳ್ಳೆಯದೆ ಎಂದು ಓದುಗನಿಗೆ ಅನಿಸುತ್ತದೆ. ಇನ್ನೊಂದು ವಿಚಿತ್ರವೇನೆಂದರೆ, ಅಂಕುಗಳ ವಿಂಗಡಣೆ. ಮೊದಲ ನೆಯ ಅಂಕಿನ ಕೊನೆಯ ದೃಶ್ಯದಲ್ಲಿ ಸುಭದ್ರಾಬಾಯಿ ಗುಡಿಯಲ್ಲಿ ದೇಸಾಯರ ಕೈಯಿಂದ ಪಾರಾಗುತ್ತಾಳೆ. ಎರಡನೆಯ ಅಂಕಿನ ಮೊದಲನೆಯ ದೃಶ್ಯದಲ್ಲಿ ಮನೆಗೆ ಬರುತ್ತಾಳೆ, ಹಾಗು ಆದ ಸಂಗತಿಯನ್ನು ಗಂಡನಿಗೆ ಹೇಳುತ್ತಾಳೆ. ಹೀಗೆ

ಸಮಯವಿಚ್ಛೇದವಿಲ್ಲದ ಎರಡು ದೃಶ್ಯಗಳಲ್ಲಿ ಒಂದನ್ನು ಒಂದು ಅಂಕಿಗೂ ಇನ್ನೊಂದನ್ನು ಇನ್ನೊಂದಕ್ಕೂ ವಿನಾಯಕರು ಏಕೆ ಹಾಕಿದ್ದಾರೋ ತಿಳಿಯಲಿಲ್ಲ ಕೊನೆಗೆ ನಾನು ನನ್ನಷ್ಟಕ್ಕೆ ಸಮಾಧಾನ ಹೇಳಿಕೊಂಡೆ. ಭೀಮಣ್ಣ ಎರಡನೆಯ ಅಂಕಿನ ಮೊದಲನೆಯ ದೃಶ್ಯದ ಕೊನೆಗೆ 'ಸಾಹಸ ಮಾಡಬೇಕು' ಎಂಬ ನಿರ್ಣ ಯಕ್ಕೆ ಬರುತ್ತಾನೆ. ಈ 'ನಿರ್ಣಯ'ವು ನಾಟಕದಲ್ಲಿಯ ಮಹತ್ವದ ಸ್ಥಲ, ಅನಕ್ಕೆಂದು ಹೊಸ ಅಂಕದ ಪ್ರಥಮಸ್ಥಾನ ಅದಕ್ಕೆ ದೊರಕಿರಬಹುದು. ಆದರೂ ಇಷ್ಟರಿಂದ ನನಗೆ ಸಮಾಧಾನವಾಗಿಲ್ಲ.

ಇನ್ನೊಂದು ಸೂಚನೆ. ಸ್ವಾತಂತ್ರ್ಯೋತ್ತರ ಪರಿಸ್ಥಿತಿಯಲ್ಲಿ ನಮ್ಮ ಹಾಸ್ಯ ರಸದ ಕಲ್ಪನೆ ತುಸು ಬದಲಾಗಿದೆ. ಆ ದೃಷ್ಟಿಯಿಂದ ನಾಟಕದಲ್ಲಿ ಕೆಲವೊಂದು ವಾಙ್ಮಯೀನ ಬದಲಾವಣೆಗಳು ಆಗಬೇಕಾದದ್ದು ಅತ್ಯವಶ್ಯಕ. ನಾಟಕದ ಪುನರ್ಮುದ್ರಣದ ಕಾಲಕ್ಕೆ ನನ್ನ ಯಾವ ಸೂಚನೆಯನ್ನು ಸ್ವೀಕರಿಸದಿದ್ದರೂ ಇದೊಂದು ಸೂಚನೆ ಸ್ವೀಕೃತವಾದರೆ ನನ್ನ ಲೇಖನವು ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಈ ಮೊದಲು ಹೇಳಿದ ಒಂದು ವಿಷಯವನ್ನು ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಜನನಾಯಕವು ಇನ್ನೊಂದು ಸಮಸ್ಯೆಯನ್ನು ಪರಿಪೂರ್ಣವಾಗಿ ಬಿಡಿಸಿಲ್ಲ. ಜನನಾಯಕವನ್ನು 'Heroic theme grafted upon an unheroic age' ಎಂದು ವರ್ಣಿಸಬಹುದು. ಈ 'ಕಸಿ' ಚೆನ್ನಾಗಿ ಆಗಿದೆಯೇ? ಮೇಲ್ಕಾಣಿಸಿದ ಕೆಲವು ದೃಶ್ಯಗಳಲ್ಲಿ ಅದು ಚೆನ್ನಾಗಿ ಆಗಿದೆ. ಆದರೆ ಆಧುನಿಕ ಕಾಲದಲ್ಲಿ Heroismದ ಪರಮಾವಧಿಯೆಂದರೆ ಕಮೀಶನರರಿಗೆ ಅರ್ಜಿ ಹಾಕು ವದು. ಇಂಥ ಅರ್ಜದಾರರ ಬಾಯಲ್ಲಿಯ Heroic ಮಾತುಗಳಿಗೂ ಅವರು ಕೊನೆಗಾಣಿಸಿದ ಕೆಲಸಕ್ಕೂ ನಡುವೆ ಬೀಳುವ ಅಂತರವನ್ನು ತುಂಬುವ ಬಗೆ ಯೆಂತು? ಆಧುನಿಕ ಕಾಲದಲ್ಲಿಯ Heroism ಹೇಗೆ ಇರಬಲ್ಲದು?—ಗಾಲ್ಸ ವರ್ದಿಯು Strifeದಂಥ ನಾಟಕದಲ್ಲಿ ಒಂದು ಬಗೆಯ Heroism ತಂದಿದ್ದಾ ನೇನೋ ನಿಜ. ಆದರೆ Robertsನಂಥವನು Tragic Hero ಆದರೆ Heroi ನಾಟಕದಲ್ಲಿಯ ಕಾವ್ಯಮಯ ಭಾಷಣಗಳ ಗತಿಯೇನು?— ಇವೆಲ್ಲ ಕಠಿಣ ಸಮಸ್ಯೆಗಳೇ. ಆದರೆ ಈಗಾಗಲೇ ಇಂಥ ಪ್ರಯತ್ನ ಮಾಡಿ ಈ ಸಮಸ್ಯೆಗೆ ಆಧ ಉತ್ತರಕೊಟ್ಟ ವಿನಾಯಕರು ಇನ್ನೊಂದು ಇದೇ ಮಾದರಿಯ ನಾಟಕ ಬರೆದ

ರ್ಣ ಯಶಸ್ಸಿನ ಉತ್ತರ ಕೊಡಲಿ ಎಂಬುದು ನನ್ನ ಹಾರೈಕೆ.

ವಿನಾಯಕರ ಇತರ ನಾಟಕಗಳ ಬಗ್ಗೆ ಹೆಚ್ಚಿಗೆ ಬರೆಯುವ ಕಾರಣವಿಲ್ಲ. ದರೆ ಅವರ 'ತುಳಸಿ' ಎಂಬ ಒಂದಂಕಿನ ನಾಟಕದಲ್ಲಿ ತಮ್ಮಲ್ಲಿರುವ ರುದ್ರ ತಿಭೆಯನ್ನು ಮತ್ತೆ ಬಯಲಿಗೆ ತಂದು, ತಮ್ಮ ಬಗ್ಗೆ ಹೆಚ್ಚಿನ ವಿಶ್ವಾಸವನ್ನು ಟ್ಟಿಸಿದ್ದಾರೆ. 'ತುಳಸಿ'ಯು Shakespearean ಅಲ್ಲವಾದರೂ ಖಂಡಿತವಾಗಿ ate Elizabethan ನಾಟಕ. ಅದೇ ಜೀವನದ ಭೀಕರತೆಯ ಅನುಭವ, ಣಾ ಕಾಣಾ ರುದ್ರ ಅನುಭವಕ್ಕೆ ತಲೆವಾಗುವ ಎದೆಗಾರಿಕೆ, ಅದೇ ಕೈಬೆರಳನ್ನು ರಿಸಿ ಹೊರಬರುವ ವಿಧಿಶಕ್ತಿ, 'ತುಳಸಿ'ಯಲ್ಲಿ ಕಂಡುಬರುತ್ತವೆ. Duchess of lalfiಯಂಥ ನಾಟಕಗಳು ಹುಟ್ಟಿದುದು ಇಂಥ ಪರಮಾವಧಿ ಭಯಾನಕತೆಯ ರಿಪಾಕದಿಂದಲೇ ಅಲ್ಲವೇ ?

ಇನ್ನುಳಿದ 'ವಿಮರ್ಶಕ ವೈದ್ಯ'ವೇ ಆಗಲಿ, 'ಯುಗಾಂತರ'ವೇ ಆಗಲಿ, ತ್ರದ ದೃಷ್ಟಿಯಿಂದ ಬೇರೆಯಾಗಿದ್ದರಿಂದ ಅವನ್ನು ಇದೇ ನಿಬಂಧದಲ್ಲಿ ಚರ್ಚಿ ವದು ಸಯುಕ್ತಿಕವಾಗಲಾರದು.

# ಸಮರಸವೇ ಜೀವನ

ಈ ಶತಮಾನದ ಆರಂಭದ ಇಪ್ಪತ್ತೈದು ವರುಷಗಳಲ್ಲಿಯ ಜೀವನದ ಳ-ವಿಸ್ತಾರ, ಏರಿಳಿತ, ಸೋಲು-ಗೆಲವು, ಹೊಯ್ದಾಟ-ಹೋರಾಟಗಳನ್ನು ತ್ರಿಸುವ ಈ ಕಾದಂಬರಿ–ಸರ್ವಾಂಗಪೂರಿತವಾದ ಕಾದಂಬರಿ – ಗೋಕಾಕರ ಲುಶತಮಾನದ ತಪಸ್ಸಿನ ಸಿದ್ಧಿಯಾಗಿದೆ. ಕವಿ, ವಿಮರ್ಶಕ ಹಾಗು ತತ್ವ ಜ್ಞಾನ, ಅನುಭಾವಗಳ ಜಿಜ್ಞಾಸುವಾದ ಲೇಖಕರ ಈ ಕಾದಂಬರಿಯಲ್ಲಿ ಕಾವ್ಯದ ನೋಹರತೆಯನ್ನು, ಬದುಕಿನ ವಿಶ್ಲೇಷಣೆಯನ್ನು, ಅಂತಃಪ್ರಜ್ಞೆಯನ್ನು ಕಾಣು ೕವೆ. ಇಲ್ಲಿ ವ್ಯಕ್ತಿಯ ಸಮಾಜದ ಜೀವನಚಿತ್ರವನ್ನು, ರಾಜಕೀಯ, ಸಾಮಾ- ಕ ಹಾಗು ಧಾರ್ಮಿಕವಾದ ಸಮಸ್ಯೆಗಳನ್ನು ಕಾಣುತ್ತೇವೆನ್ನುವದಕ್ಕಿಂತ ಅನಂತ- ವ ಜೀವನಪ್ರವಾಹದ ಚಿತ್ರವನ್ನು ನೋಡುತ್ತೇವೆಯೆನ್ನಬೇಕು.

ವ್ಯಕ್ತಿ, ಮನೆ, ಊರು, ನೆರೆಹೊರೆ ಪ್ರಾಂತ, ದೇಶ ಹಾಗು ವಿಶ್ವ ಹೀಗೆ ಸ್ತಾರವಾಗುತ್ತ ಹೋಗುವ ಬಹುಮುಖಜೀವನದಲ್ಲಿ ವಿರಸದ ವಿಷವನ್ನು ಳೆದು, ರಸ ಸಮರಸಗಳನ್ನು ತುಂಬಬೇಕೆಂಬುದು ಕಾದಂಬರಿಕಾರರ ಉನ್ನತ ದರ್ಶವಾಗಿದೆ, ಸಂಕಲ್ಪವಾಗಿದೆ.

ಅದಕ್ಕಾಗಿ ಲೇಖಕರು ಬಹು ವಿಶಾಲವಾದ ರಂಗಭೂಮಿಯನ್ನು ಸಿದ್ಧ- ೊಳಿಸಿದ್ದಾರೆ. ವೈಯಕ್ತಿಕ ಹೃದಯ-ದ್ವಂದ್ವ, ಕೌಟುಂಬಿಕ ವಿರಸ, ಅಧೋ- ತಿಗಿಳಿಯುತ್ತಿರುವ ಸಂಕಲ್ಪಶೂನ್ಯವಾದ ನೈತಿಕ, ಧಾರ್ಮಿಕ ಜೀವನ, ಪಲ್ಲಟ- ುತ್ತಿರುವ ಧಾರ್ಮಿಕ, ಸಾಮಾಜಿಕ, ಹಾಗು ರಾಜಕೀಯ ವಿಚಾರಸಂಪ್ರದಾಯ- ಳು, ಪ್ರಾಂತ ಪ್ರಾಂತಗಳ ಸಂಸ್ಕೃತಿ, ದೇಶದ ಬಹುಮುಖವಾದ ಸಮಸ್ಯೆಗಳು, ಾಗು ಅಂತರ್ರಾಷ್ಟ್ರೀಯ ಜೀವನ, ಪೂರ್ವಪಶ್ಚಿಮಗಳ ಸಂಗಮ — ಹೀಗೆ ಸ್ತೃತವಾದ ಹಿನ್ನೆಲೆಯ ಚಿತ್ರಗಳು ರಂಗಭೂಮಿಯ ಒಂದು ತುದಿಯಿಂದ ನ್ನೊಂದು ತುದಿಯವರೆಗೆ ಕಂಗೊಳಿಸುತ್ತವೆ. ಸೊಗ್ಗಾವಿಯಿಂದ ಇಂಗ್ಲಂಡದ ರೆಗೆ ಜೀವನಪ್ರಯೋಗಕ್ಷೇತ್ರ ಹಬ್ಬಿದೆ. ಆದುದರಿಂದ ಲೇಖಕರು ಹೇಳುವಂತೆ ೀವನವೆ ಈ ಕಾದಂಬರಿಯ ನಾಯಕತ್ವವನ್ನು ವಹಿಸಿದೆಯೆನ್ನಬಹುದು.

:: ೨ ::

ಇಲ್ಲಿ ಕತೆಯ ವಿಸ್ತಾರ ನಾಲ್ಕು ಪೀಳಿಗೆಗಳ ಜೀವನಚಿತ್ರಗಳನ್ನು ರ ಸಿದೆ. ರೇಖಾವಿನ್ಯಾಸದಲ್ಲಿ ಮೂಡಿ ನಿಂತ ಮೊಗ್ಗಾವಿಯ ಪ್ರಾರಂಭದ ತಿರುಕಾಚಾರ್ಯರು, ಹಾಗು ಹೈಗ್ರೀವಾಚಾರ್ಯರು ಮೊದಲಿನ ತಲೆಮಾರಿನವ ಬಹುದು. ಗೋವಿಂದರಾಯರು ಸುಬಣಾಚಾರ್ಯರು, ಮೋಡಕ, ಕೇ ರಾಯರು, ಜಾನಕಿಬಾಯಿ, ರಮಾಬಾಯಿ, ಸರಸ್ವತಿಬಾಯಿ, ರಮಾತಾ ರಂಗಾಸಾನಿ, ವೆಂಕಮ್ಮ ಮೊದಲಾದವರು ಎರಡನೆಯ ಪೀಳಿಗೆಗೆ ಸೇರಿದವ ಇವರೆಲ್ಲರ ಪರಿಸರದ ಜೀವನ, ಹೃದಯಸಂಸ್ಕಾರ, ಮೊದಲಾದವುಗಳಲ್ಲಿ ತುಂ ವಿರಸ, ವೈಷಮ್ಯಗಳು ಮೂರನೆಯ ತಲೆಮಾರಿನವರಾದ ನರಹರಿ-ಕುಸು ಶೀನೂ, ಪದ್ಮಾವತಿ-ಕೇಶವ, ಮೇನಕಿ, ಕುಡಚಿ, ತಿಪ್ಪ, ಭೀಮೂ, ಕುವ ಬರ್ವೆ, ಎಲಿಸ್ ಮೊದಲಾದವರ ಜೀವನವನ್ನು ರೂಪಿಸಲು ಮೂಡಿಬಂ ಅರುಣ, ಉಷೆ ಮೊದಲಾದ ಹಸುಗೂಸುಗಳು ಬರಲಿರುವ ಜೀವನದ, ನಿಧಿಗಳಾಗಿದ್ದಾರೆ. ಸ್ವಾಮಿದಾಸರು ಎರಡನೆಯ ತಲೆಮಾರಿನ ವ್ಯಕ್ತಿಗಳಾಗಿದ್ದ ಅವರ ವ್ಯಕ್ತಿತ್ವದ ಪ್ರಭಾವ ಮುಂಬರುವ ತಲೆಮಾರಿನ ವ್ಯಕ್ತಿಗಳ ಮೇ ಆಗುವದರಿಂದ ಅವರು ಕೊನೆಯವರೆಗೂ ಮಹತ್ವದ ಶಕ್ತಿಯಾಗಿ ಬೆಳೆದು ದ್ದಾರೆ.

ಈ ಕತೆ ಮೊಗ್ಗಾವಿಯ ಕೌಟುಂಬಿಕ ಜೀವನದ ವಿರಸದಲ್ಲಿ ಹ ಲಂಡನ್ನಿನ ಪೂರ್ವಪಶ್ಚಿಮ ಜೀವನಗಳವರೆಗೆ ಹಬ್ಬಿ ಕೊನೆಗೆ ನರ್ಮ ಪೂರ್ಣಜೀವನಕೇಂದ್ರದಲ್ಲಿ ಪೂರ್ಣತೆಯ ಕನಸನ್ನು ಕಾಣುತ್ತದೆ. ಕೆ ವ್ಯಕ್ತಿಗಳು ಕಾದಂಬರಿಯ ಕೊನೆಯವರೆಗೂ ಉಳಿದು, ಬೆಳೆದು ಬಂದಿದ್ದಾ ಹಲವರು ಅಲ್ಲಲ್ಲಿ ಕಾಣಿಸಿಕೊಂಡು ಹೋಗಿದ್ದಾರೆ. ಧಾರ್ಮಿಕ ಸಂಪ್ರದಾಯ ಪಲ್ಲಟ, ರಾಜಕೀಯ ಆಂದೋಲನ, ವ್ಯಕ್ತಿಗತ ಹೃದಯದ್ವಂದ್ವ, ಪ್ರಾಂತಿ ಸಾಮರಸ್ಯ, ವ್ಯಕ್ತಿಸಮಾಜಗಳ ಬಂಧುರ ಸಂಬಂಧ, ರಾಜಕೀಯ ವಿಷಮ ಭಿನ್ನಸಂಸ್ಕೃತಿಗಳ ಮಿಲನ, — ಹೀಗೆ ಅನೇಕ ಸಮಸ್ಯೆಗಳು, ವಾದಗಳು ಕಾದಂಬರಿಯಲ್ಲಿ ಬರುವವು. ಆದುದರಿಂದಲೆ ಸನ್ನಿವೇಶ, ಪಾತ್ರಸೃಷ್ಟಿಗ ವಿಪುಲತೆ ಕಂಡುಬರುವವು. ಓದುಗನು ಒಂದೊಂದು ಸಲ ಕಾಡಿನಲ್ಲಿ ದ

ತಪ್ಪಿಸಿಕೊಂಡಂತೆ ಅಲೆಯುವಂತಾಗಬಹುದು. ಆದರೆ ಕಾದಂಬರಿಯ ಮೂಲ ದರ್ಶನವನ್ನು ಮನಸ್ಸಿನಲ್ಲಿ ಭದ್ರವಾಗಿರಿಸಿಕೊಂಡು ಓದಿದಾಗ ಅನೇಕತೆಯ ಅಂತ-ರಾಳದಲ್ಲಿ ಒಂದು ಏಕತೆಯ ದರ್ಶನವಾಗುವದು. ಇಲ್ಲಿಬರುವ ಎಲ್ಲ ಸನ್ನಿವೇಶಗಳು, ವ್ಯಕ್ತಿಗಳು ಆ ಒಂದು ಮೂಲದರ್ಶನದೆಡೆಗೆ ನಮ್ಮನ್ನು ಕರೆದೊಯ್ಯುತ್ತವೆ.

ದಾಂಪತ್ಯದಲ್ಲಿ ಸಾಮರಸ್ಯವನ್ನು ಕಾಣದ ಗೋವಿಂದರಾಯರು ಕೌಟುಂಬಿಕ ಜೀವನದಲ್ಲಿ ಅನಾಸಕ್ತಿಯನ್ನು ತೋರಿ ಈ ಸಾನಿಯಲ್ಲಿ ಬದುಕಿನ ನೆಮ್ಮದಿಯನ್ನು ಕಂಡುಕೊಳ್ಳುತ್ತಾರೆ. ಸಿಂಹಿಣಿ ಜಾನಕಿಬಾಯಿಯು ಮನೆಯ ಆರಸಿ. ಇಂತಹ ವಿರಸದಲ್ಲಿ ಕೇಶವ ಹಾಗು ಕುಸುಮಾ ಇವರ ಬಾಲ್ಯ ರೂಪುಗೊಳ್ಳುತ್ತ ನಡೆಯಿತು. ಇದರಂತೆ ನಾಲ್ಕನೆಯ ಹೆಂಡತಿಯಾದ ರಮಾಬಾಯಿಯೊಂದಿಗೆ ವಿಷಮ ಜೀವನ ಸಾಗಿಸುತ್ತಿರುವ ಹೈಗ್ರೀವಾಚಾರ್ಯರ ಮನೆಯಲ್ಲಿಯೂ ಇನ್ನೊಂದು ಬಗೆಯ ವಿರಸ. ಮಲತಾಯಿಯ ಕಣ್ಣರಿಕೆಯಲ್ಲಿ ಬೆಳೆಯಬೇಕಾಗಿ ಬಂದ ಪದ್ಮಾವತಿ ಬದುಕಿನಲ್ಲಿಯ ಅನಂತ ಸಹನೆಯನ್ನು ಅರಗಿಸಿಗೊಂಡು ಬೆಳೆಯು-ತ್ತಾಳೆ. ಅವಳ ತಮ್ಮ ನರಹರಿ ಮನೆಯ ವಿರಸವನ್ನು ಕಂಡು ನೋಯುತ್ತಿರು-ತ್ತಾನೆ. ಈ ವಿರಸವೇ ನರಹರಿಯನ್ನು ಬದುಕಿನ ಮಥನಕ್ಕೆ ಪ್ರಚೋದಿಸಿತು. ಸಾಮರಸ್ಯದ ಸುಂದರ ಕನಸನ್ನು ಆತನೆದುರು ನಿರ್ಮಿಸಿತು. ದೇಸಾಯರ ಮನೆತನದೊಡನೆ ಬೀಗತನ ಮಾಡಿಕೊಂಡಂದಿನಿಂದ ವಿರಸ ಇನ್ನೂ ಹೆಚ್ಚುತ್ತದೆ. ಜಾನಕಿಬಾಯಿಯ ಕೈಕೆಳಗೆ ಪದ್ಮಾವತಿಯ ಬಾಳು ಕಂಬನಿಯ ಕಡಲಾಗುತ್ತದೆ. ಮೂರ್ಖ ಪಶುವಿನಂತಿದ್ದ ಕೇಶವ ಆ ಸಾಧ್ವಿಯನ್ನು ಕೊನೆಯ ವರೆಗೂ ಅರ್ಥ ಮಾಡಿಕೊಳ್ಳದಿರುವದು ಮುಂಬರುವ ದುರಂತದ ದುಸ್ವಪ್ನವಾಗಿದೆ. ಆಗಿನ ಆತನ ಹೃದಯಾಂತರಾಳದಲ್ಲಿ ಅನುರಾಗದ ಸೆಲೆ ಪುಟಿದಿದ್ದರೂ ಅದು ತಾತ್ಕಾಲಿಕ. ಕೇಶವನಿಗೆ ಸ್ವತಂತ್ರ ವ್ಯಕ್ತಿತ್ವವೇ ಇಲ್ಲದಿರುವಾಗ ಪದ್ಮಾವತಿಯ ಬದುಕಿಗೆ ನೆಮ್ಮದಿ ಹೇಗೆ ಬರಬೇಕು? ಅವನಿಗೆ ಬೇಕಾದುದು ಭೋಗ, ಶೃಂಗಾರಚೇಷ್ಟೆ. ಆತನ ಜೀವನಸಂಸ್ಕಾರವೇ ಅಷ್ಟು. ಅವನ ಜೀವನಕ್ಕೆ ಚಿಕ್ಕ ಆದರ್ಶ ಕೂಡ ಇರಲಿಲ್ಲ. ಪದ್ಮಾವತಿಯ ದುರಂತಮರಣವು ಕಾದಂಬರಿಯ ಮಹತ್ವದ ಅಂಶಗಳಲ್ಲೊಂದಾಗಿದೆ. ನರಹರಿಯ ಜೀವನಕ್ಕೆ ಅದೊಂದು ದೊಡ್ಡ ಆಘಾತ. ಬದುಕಿನ ಪ್ರಜ್ಞೆ, ಅರಿವುಗಳನ್ನು ಮೂಡಿಸಿ ನರಹರಿಯ ಬಾಳ-ಪ್ರವಾಹದ ಗತಿಯನ್ನು ಬದಲಿಸಿದ ಪ್ರಸಂಗವಿದು.

ನರಹರಿಯ ಗೆಳೆಯನಾಗಿ ಬೆಳೆದು ಬಂದ ಶೀನೂ ಅವನಂತೆ ಆದರ್ಶದ ಕನಸಿಗನಲ್ಲದಿದ್ದರೂ, ಶುಚಿಯಾದ ಸುಸಂಸ್ಕೃತ ಜೀವನಕ್ಕಾಗಿ ಹಾತೊರೆಯುವವ. ವಿಲಾಸ ಆತನ ರಕ್ತದಲ್ಲಿ ತುಸು ಹೆಚ್ಚಾಗಿಯೇ ಸೇರಿತ್ತೆನ್ನಬಹುದು. ಮೊಗ್ಗಾವಿ ಯಲ್ಲಿ ಜೊತೆಯಾಗಿ ಆಡಿ, ಓದಿ, ಬೆಳೆದ ಇವರಿಬ್ಬರಲ್ಲಿ ಅವರವರ ಕೌಟುಂಬಿಕ ಜೀವನ, ನೋವು, ನಲಿವುಗಳು ಬೇರೆ ಬೇರೆ ಹೃದಯ-ಪರಿಪಾಕವನ್ನುಂಟು ಮಾಡುತ್ತವೆ.

ನರಹರಿ ಶೀನರು ಕಾಲೇಜಿಗಾಗಿ ಪುಣೆಗೆ ಹೋಗುವ ಕಥಾಭಾಗಕ್ಕೆ ಹೊಸ ತೊಂದು ವಿಶಾಲವಾದ ಕ್ಷೇತ್ರ ದೊರೆಯುತ್ತದೆ. ಅಕ್ಕನ ಸಾವಿನಿಂದ ನರಹರಿಯು ನಿರಾಶಾವಾದಿಯಂತೆ ತೋರುತ್ತಾನೆ. ಜಗದ ನಶ್ವರತೆ, ಜೀವನಪಥದಲ್ಲಿ ವ್ಯಕ್ತಿಯ ಏಕಾಕಿತನ, ಅಂತಃಕರಣದ ಸೂತ್ರ ಹರಿದು ಹೋಗುವಾಗಿನ ಅದಮ್ಯ ವ್ಯಥೆ, ಬದುಕಿನಾಟದಲ್ಲಿ ವಿಧಿಯ ಕೈವಾಡ, ಹೀಗೆ ಹಲವಾರು ಬಗೆಗಳಲ್ಲಿ ನರ-ಹರಿಯ ಹೃದಯದ ಅಂತರ್ಮಥನ ನಡೆದುದರ ಚಿತ್ರ ತುಸು ದೀರ್ಘವೆನಿಸಿದರೂ ಸನ್ನಿವೇಶಕ್ಕೆ ಉಚಿತವಾಗಿದೆ.

ಕನ್ನಡದ ಸೀಮೆಯನ್ನು ದಾಟಿ ಪುಣೆಗೆ ಬಂದು ನೆಲೆಸಿದಂದಿನಿಂದ ನರ-ಹರಿಯ ವ್ಯಕ್ತಿತ್ವವಿಕಾಸಕ್ಕೆ ಒಳ್ಳೆಯ ವಾತಾವರಣ ನಿರ್ಮಾಣವಾಗುತ್ತದೆ. ಮರಾಠಿ-ಕನ್ನಡದ ಮೋಡಕರು, ಕರ್ನಾಟಕ ಕ್ಲಬ್, ನರಹರಿಯಂತೆ ಕಾವ್ಯ ಜೀವಿಯಾದ ವಿಷ್ಣು, ಖಳನಾಯಕನಂತೆ ತೋರುವ ಕುಡಚಿ, ದೈವವಾದಿ ಶೀನು, ರಾಮಗಿರಿ, ಮತ್ತು ಬುದ್ಧಿಜೀವಿಗಳಾದ ಪ್ರೊಫೆಸರರು, ಇವರೆಲ್ಲರ ಮಧ್ಯದಲ್ಲಿರುವ ನರಹರಿಯ ಬದುಕು ಹೊಸ ಸತ್ವವನ್ನು ಅಳವಡಿಸಿಕೊಳ್ಳುತ್ತದೆ. ಎರಡು ಪ್ರಾಂತಗಳ ನಡುವೆ ಅವಶ್ಯವಾಗಿ ಇಂದು ಬೆಳೆಯ ಬರಬೇಕಾದ ಸಾಮರಸ್ಯಕ್ಕೆ ವಿಷ್ಣು-ನರಹರಿಯರ ಸ್ನೇಹ, ಆತ್ಮೀಯತೆಗಳು ಪ್ರತೀಕವಾಗಿ ನಿಂತಿವೆ.

'ಅಂತಃಸತ್ವ'ದಲ್ಲಿ ಘೋರ ಆಘಾತಕ್ಕೀಡಾದ ನರಹರಿಯ ಅಂತರಂಗದ ಜೀವನದ ಸ್ವರೂಪವು ಮೂಡಿ ಬಂದಿದೆ. ತಂದೆಯ ಸಾವಿನಿಂದ ಆತನೆದುರು ವಿಧಿಯು ಬೇರೆ ಒಂದು 'ಅಗ್ನಿದಿವ್ಯ'ವನ್ನೊಡ್ಡುತ್ತದೆ. ಬೆಳೆಯುತ್ತಿರುವ ಕುಸುಮಾ ನರಹರಿಯ ರೋಹಿಣಿಯಾಗಿ ಎದೆಯಲ್ಲಿ ಮೂಡಿ ನಿಲ್ಲುತ್ತಾಳೆ. ಪದ್ಮಾವತಿಯನ್ನು ಕಳೆದುಕೊಂಡು ಪರಿತಪಿಸಿದ ಕೇಶವ, ಅವಳನ್ನು ಮರೆಯಲು ಪ್ರಾರಂಭಿಸುತ್ತಾನೆ. ಜಾನಕಿಬಾಯಿಯವರ ಜಾಗಟೆಯ ಬಾಯಿಯಂತು

ಇದ್ದವ್ವೇ. ದೇಸಾಯರಿಗೆ ಮನೆ ನಿತ್ಯ ನರಕ. ಅವರು ಕುಸುಮಾಳನ್ನು ತಮ್ಮ ಬದುಕಿನ ಅವಿಭಾಜ್ಯಭಾಗವೆಂದು ತಿಳಿದಿದ್ದರು. ಡಾಂಭಿಕರಾದ ಸುಬಣಾಚಾರ್ಯರು, ಧೂರ್ತ ಮತ್ತು ಸಮಯಸಾಧಕನಾದ ಭೀಮು, ಅವನ ತಂಡುಲಧ್ವಂಸ ಸಮಾಜ,–ಇವೆಲ್ಲವುಗಳ ಚಿತ್ರ ಸುಂದರವಾಗಿದೆ. ಮೊಗ್ಗಾವಿಯಲ್ಲಿಯ ಒಂದು ವರುಷದ ಜೀವನಕ್ಕೆ ಅರ್ಥವಿದೆಯೆಂದು ಕುಸುಮಾಳನ್ನು ನೋಡಿದಾಗ ನರಹರಿಯು ಅಂದುಕೊಂಡುದರಲ್ಲಿ ಕಾದಂಬರಿಕಾರರು ನರಹರಿಯ ಹೃದಯದಲ್ಲಿ ಸೂಕ್ಷ್ಮವಾಗಿ ರೂಪುಗೊಳ್ಳುತ್ತಿರುವ ಪ್ರೀತಿಯ ಕರುಹನ್ನು ತೋರಿದ್ದಾರೆ.

ಜಗತ್ತೆಂದರೆ ವಿಷಮವೆಂದು ದೇಸಾಯರ ಸಿದ್ಧಾಂತ. ಆದರ ಕ್ರೂರ ಅನುಭವ ನರಹರಿಗೆ ಬಂದೊದಗುತ್ತದೆ. ಕುಸುಮಾಳಲ್ಲಿ ಬಾಳ ಜೊತೆಗಾರ್ತಿಯನ್ನು ಗುರುತಿಸಿ, ಸಫಲತೆಯ ದಾರಿಯಲ್ಲಿರುವಾಗಲೆ ಆತನಿಗೆ ಮಾತೃಗಾಮಿಯೆಂಬ ಬಿರುದು! ಸುಬಣಾಚಾರ್ಯರ ಅಪಪ್ರಚಾರ, ರಮಾಬಾಯಿಯ ಅದಮ್ಯ ಕಾಮತೃಷ್ಣೆ ಇವೆರಡೂ ನರಹರಿಯ ಬದುಕನ್ನು ತೀರವಿಲ್ಲದ ಕರಾಳ ಸಾಗರಕ್ಕೆ ನೂಕುತ್ತವೆ. ನರಹರಿಯು ಆತ್ಮಹತ್ಯೆಯ ಸಾಹಸಕ್ಕೆ ಕೈಹಾಕುತ್ತಾನೆ. ಇಲ್ಲಿ ಸಾಂಕೇತಿಕವಾಗಿ ಆತನ ತಾಯಿ ಕಾಪಾಡುತ್ತಾಳೆ. ಧ್ಯೇಯವಾದದತ್ತ ಆತನನ್ನು ತಿರುಗಿಸಲು ಸಹಾಯಕಳಾಗುತ್ತಾಳೆ. ಆದರೆ ಆವರೆಗಿನ ನರಹರಿಯಲ್ಲಿಯ ಚಿಂತನೆ, ಮನದ ಸಂಘರ್ಷಣೆಯ ಚಿತ್ರ ಕಾವ್ಯದ ಮೆರುಗು, ತತ್ವಜ್ಞಾನ, ಅನುಭಾವಗಳ ಒಲವನ್ನು ಪಡೆದು ನಿಂತಿದೆ. ಮುಂದೆ ಸ್ವಾಮಿದಾಸರ ದರ್ಶನ ನರಹರಿಗೆ ಬದುಕಿನ ದರ್ಶನವಾಗಿ ಪರಿಣಮಿಸುತ್ತದೆ. ಈ ವರೆಗೆ ಕುಸುಮಾ ಆತನನ್ನು ಸೆಳೆಯುತ್ತಿದ್ದರೆ, ಈಗ ಆತ ಆರಾಧಿಸುವ ಅನಂತದಲ್ಲಿ ಕುಸುಮಾ ಲೀನವಾಗಿದ್ದಾಳೆ.

ಕುದುರೆಸ್ವಾರಳಾಗಿ ಬಂದ ಚಿತ್ರಾಂಗದೆ ಪ್ರಮೀಲೆಯ ಆಗಮನದಿಂದ ನರಹರಿ ಮರಿ-ಸ್ವಾಮಿದಾಸನಾಗುವದು ತಪ್ಪುತ್ತದೆ. 'ಜೀವನದಲ್ಲಿ ನೀನಿನ್ನೂ ಸಾಧಿಸತಕ್ಕದ್ದಿದೆ. ಹೋಗು' ಎಂದು ಸ್ವಾಮಿದಾಸರು ಹೇಳಿದ ಕೂಡಲೆ ನರಹರಿಯ ಹೃದಯ ಮತ್ತೆ ಪುಣೆ, ಕಾಲೇಜು, ಕುಸುಮಾ, — ಇವರೆಲ್ಲರ ಕಡೆಗೆ ಧಾವಿಸುತ್ತದೆ. ಇಲ್ಲಿ ನರಹರಿ ಮತ್ತೆ ಮೊದಲಿನ ನರಹರಿಯಾಗುತ್ತಾನೆ. ಮೊಗ್ಗಾವಿಯಲ್ಲಿ ಕೇಶವನಿಗೆ ಎರಡನೆಯ ಮದುವೆಯಾದಂದಿನಿಂದ ಜಾನಕಿಬಾಯಿಯ ಆಳಿಕೆ ಅವಸಾನದ ದಾರಿಯನ್ನು ಹಿಡಿಯುತ್ತದೆ. ಹೆಂಡತಿ, ಮಗನ

ಸಂಪರ್ಕವನ್ನು ಪೂರ್ತಿಯಾಗಿ ಹರಿದುಕೊಂಡು ಪುಣೆಗೆ ಬಂದು ದೇಸಾಯ
ಬೀಡು ಬಿಡುತ್ತಾರೆ. ಇದು ಅವರ ಮನೆಯ ವಿರಸದ ಕೊನೆಯ ಹಂತ.

ಪ್ರೀತಿಯ ಯೋಗಮಾಯೆಯಲ್ಲಿ ನರಹರಿ-ಕುಸುಮಾ, ವಿಷ್ಣು-ಪ್ರಮೀಲ
ಶೀನು-ಸುಶೀಲೆಯರ ದಾಂಪತ್ಯ ರೂಪುಗೊಳುತ್ತಿದೆ. ಈ ಮೂರು ದಾಂಪತ್ಯಗ
ವ್ಯೆದಾಳಿ ನಿಲ್ಲುವವರೆಗೆ ಬಂದ ತೊಂದರೆಗಳು,ತೊಡಕುಗಳು ಕ್ರಮೇಣವಾಗಿ ಬ
ಸಲ್ಪಟ್ಟವೆ. ನರಹರಿಯನ್ನು ಪತಿಯನ್ನಾಗಿ ಪಡೆಯಬೇಕೆಂಬ ಪ್ರಮೀಲೆಗೆ ಆರಾ
ಕನಾದ ವಿಷ್ಣು ದೊರೆಯುತ್ತಾನೆ. ಕುಸುಮಾನನ್ನು ಪಡೆಯಲು ಹಂಬಲಿ
ನಿರಾಶನಾದ ಶೀನು ದೈವವಾದಿಯಾಗುತ್ತಾನೆ. ಕುಸುಮಾನನ್ನು ಮರೆಯಲ
ಸುತ್ತಾನೆ. ಹೃದಯದ ಹೊಯ್ದಾಟ ತಾಳಲಾಗದೆ ಕುಸುಮಾಳ ಬಗೆಗೆ ತಾನಿರಿ
ಕೊಂಡಿದ್ದ ಭಾವನೆ, ಅದಕ್ಕೆ ಅವಳಿಂದ ದೊರೆತ ನಿರಾಶಾದಾಯಕ ಉತ್ತರ, ಹೀ
ಸಾದ್ಯಂತವಾದ ಕತೆಯನ್ನೆಲ್ಲ ಒಂದು ರಾತ್ರಿ ನರಹರಿಗೆ ಹೇಳಿ ಹೃದಯಭಾ
ಕಡಿಮೆ ಮಾಡಿಕೊಳ್ಳುತ್ತಾನೆ. ಆದರೂ ಕೂಸಮಾ ಶೀನೂನ ಹೃದಯದ ಮೇ
ಗುರುತನ್ನಿರಸಿಯೇ ಹೋಗಿರುತ್ತಾಳೆ. ತಾನು ಕಲ್ಪಿಸಿಕೊಂಡ ಸ್ವನಿರ್ಮಿ
ಮಧುರಸ್ವಪ್ನಕ್ಕೆ ಶೀನೂ 'ಪ್ರೇಮ' ವೆಂದು ಕರೆಯುವದು ಅಷ್ಟೊಂದು ಉಚಿ
ವಾಗಲಾರದು.

ಶೀನು ಆಗಾಗ ದೇಸಾಯರ ಮನೆಗೆ ಹೋಗುತ್ತಿರುವದು, ಕುಸುಮ
ಳೊಂದಿಗೆ ಹರಟುವದು, ಅವರೆಲ್ಲರು ಕೂಡಿ ತಿರುಗಾಡಲು ಹೋಗುವದು, ಶೀ
ಅವಳಿಗೆ ಕೊಟ್ಟ ಕಾಣಿಕೆಪುಸ್ತಕ, ಆತನ ಕೋಣೆಯಲ್ಲಿ ದಂತದ ಹಣಿಗೆ, ಶೀನ
ಮೊಗ್ಗಾವಿಯಿಂದ ಬಂದಾಗ ಆತನೆಡೆಗೆ ಧಾವಿಸಿ ಕುಸುಮಾ ತನ್ನ ಅಣ್ಣನ ಕುಶ
ವಾರ್ತೆಯನ್ನು ಕೇಳಿದುದು, ಇವೆಲ್ಲ ನರಹರಿಯಲ್ಲಿ ಒಂದು ಬಗೆಯ ಸಾತ್ವಿಕ ಪ
ವನ್ನು ಹುಟ್ಟಿಸುತ್ತವೆ. ಇದೇನು ತಪ್ಪಲ್ಲ. ಮನುಷ್ಯಸಹಜವೇ! ಆದರೆ
ಪ್ರಸಂಗದಲ್ಲಿಯ ನರಹರಿಯ ವರ್ತನೆಯನ್ನು ನೋಡಿದರೆ, ಜೀವನಸೂತ್ರಗಳನ
ಪಡೆದು ಚಿದಾನಂದದಲ್ಲಿ ವಿಹರಿಸಲೆಳಿಸಿದ, ಮತ್ತು ತಾನು ಆರಾಧಿಸುವ ಅನ
ದಲ್ಲಿ ಕುಸುಮಾ ಲೀನವಾಗಿದ್ದಾಳೆಂದು ಆತ್ಮಿಕ ತೃಪ್ತಿಯನ್ನು, ಅನುಭಾವ
ವಿಶಾಲತೆಯನ್ನು ಕಂಡ 'ಆ' ನರಹರಿ ಈತನಲ್ಲವೆಂದೆನಿಸುತ್ತದೆ. ಸ್ವಾಮಿದಾ
ಸಾನ್ನಿಧ್ಯದಲ್ಲಿದ್ದಾಗಿನ ನರಹರಿಯಲ್ಲಿ ದೊಡ್ಡ ದೊಡ್ಡ ತತ್ವ, ಅನುಭಾವದ ವಿಚಾ
ಗಳೆಲ್ಲ ಜೀರ್ಣಿಸಿಕೊಳ್ಳಲಾಗದಂತೆ ಒತ್ತಾಯದಿಂದ ಆರೋಪಿಸಲ್ಪಟ್ಟದ್ದುವೆ

ಭಾಸವಾಗುವದರಲ್ಲಿ ಆಶ್ಚರ್ಯವೇನಿಲ್ಲ.

ಪ್ರಾಮುಖ್ಯವಾಗಿ ಮೂರು ದಂಪತಿಗಳ ಜೀವನದೊಂದಿಗೆ ಸುತ್ತಲಿನ ಪರಿಸರದಲ್ಲಿಯ ವ್ಯಕ್ತಿಗಳ, ಸನ್ನಿವೇಶಗಳ ಚಿತ್ರಗಳು ಮೂಡುತ್ತ ನಡೆದು ಬದುಕು "ಏರಿಳಿತ"ಕ್ಕೆ ಬರುತ್ತದೆ. ಇದು ಸಮುದ್ರಯಾನದ ಹಿಂದಿನ ಭಾಗ. ಸಮುದ್ರಯಾನದಿಂದ ಶೀನು, ವಿಷ್ಣು, ಇವರ ಜೀವನದಲ್ಲಿ ಬಂದೊಂದಗಲಿರುವ ದೊಡ್ಡ ವಿಪತ್ತುಗಳಿಗೆ ಮುಂಗುರುತಾಗಿ ಈ ಭಾಗದಲ್ಲಿ ಹೊಂಚಿದ ದುರ್ವಿಧಿಯ ಚಿತ್ರ ಸೂಚ್ಯವಾಗಿದೆ. ಇವರೆಲ್ಲರ ವ್ಯಕ್ತಿತ್ವಗಳನ್ನು ಸರಿಯಾಗಿ ರೂಪಿಸಬಲ್ಲ ಸ್ವಾಮಿದಾಸರ ಆತ್ಮಶಕ್ತಿಯು ಇಲ್ಲಿ ನೆರವಾಗಿ ನಿಂತಿದೆ.

ಪಂಢರಪುರದಲ್ಲಿ ರಮಾಬಾಯಿ ತೀರಿಹೋಗುತ್ತಾಳೆ. ನರಹರಿಯೊಂದಿಗೆ ಅನುಚಿತವಾಗಿ ನಡೆದುಕೊಂಡುದಕ್ಕೆ ಅವಳ ಹೃದಯ ಪರಿತಪಿಸಿದೆ. ಸಂಬಣಾಚಾರ್ಯರ ನೀಚತನ, ಅವರನ್ನೆ ಆಹುತಿಯನ್ನಾಗಿ ತೆಗೆದುಕೊಳ್ಳುವಂತೆ ತೋರುತ್ತದೆ. ಬಾಳಿನುದ್ದಕ್ಕೂ ಅನ್ಯಾಯ, ಅನೀತಿಯ ದಾರಿಯನ್ನು ತುಳಿದ ಸಂಬಣಾಚಾರ್ಯರಿಗೆ ವಿಧಿ ತೊನ್ನನ್ನು ದಯಪಾಲಿಸುತ್ತಾನೆ.

ಕೇಶವರಾಯರ ಅನಾರೋಗ್ಯ ಪ್ರಮೀಲೆಯ ಜೀವನವನ್ನು ಹೋಳಿಯಾಡುತ್ತದೆ. ಅವಳು ವಿಲಾಯತಿಗೆ ಹೋಗಲು ಸಾಧ್ಯವಾಗುವದಿಲ್ಲ. ಈ ರೀತಿಯಾಗಿ ಮತ್ತೆ ಇಲ್ಲಿ ನಾವು ದೈವ ಒಡ್ಡುವ ಅಗ್ನಿಪರೀಕ್ಷಾಕಾಲವನ್ನು ಕಾಣಬಹುದಾಗಿದೆ.

ಸಮುದ್ರಯಾನವು ಜೀವನಯಾನವಾಗಿದೆ. ಅಂತರರಾಷ್ಟ್ರೀಯ ಜೀವನದ ಸೂಕ್ಷ್ಮ ನಿದರ್ಶನಕ್ಕೆ ಇಲ್ಲಿ ತಕ್ಕದಾದ ಮನೋಭೂಮಿಕೆಯನ್ನು ಅಣಿಗೊಳಿಸಲಾಗಿದೆ. ಸಂಸ್ಕೃತಿಸಂಘರ್ಷ, ವಿಚಾರ ತಾಕಲಾಟಗಳನ್ನು ಎತ್ತಿ ತೋರಿಸುವದಕ್ಕಾಗಿ ಇಲ್ಲಿ ಅನೇಕ ಹೊಸ ಪಾತ್ರಗಳ ಸೃಷ್ಟಿಯಾಗಿದೆ. ಪರದೇಶದಲ್ಲಿ ನಿಂತ ಶೀನು ಮತ್ತು ವಿಷ್ಣು ಇವರ ಜೀವನವು ಅನೇಕ ಮಾರ್ಪಾಡುಗಳನ್ನು ಹೊಂದುತ್ತ ನಡೆದಿವೆ. ಅವರನ್ನು ಅಗಲಿ ಕಡಲನಾಚೆಗೆ ವಿರಹಿಗಳಾಗಿರುವ ಪ್ರಮೀಲೆ, ಸೂಶೀಲೆಯರಲ್ಲಿಯೂ ಅನೇಕ ಬಗೆಯ ಪರಿವರ್ತನೆಗಳಾಗುತ್ತ ನಡೆದಿವೆ; ಈ ಭಾಗದಲ್ಲಿ ನಾಯಕ ನಾಯಕೆಯರ ಅಂತರಂಗದ ಜೀವನದಲ್ಲಿ ಬಿರುಗಾಳಿಯೆದ್ದಿದೆ; ಸ್ವದೇಶದಲ್ಲಿದ್ದ, ನರಹರಿಯ ಅಂತರಂಗದಲ್ಲೂ ಒಂದು ಬಗೆಯ ನವೀನ ಹೋರಾಟ ಪ್ರಾರಂಭವಾಗಿದೆ. ದೇಶದ ಕರೆ ದಶದಿಕ್ಕುಗಳಲ್ಲಿ ಮೊಳಗಿದಾಗ ನರಹರಿ ಅದಕ್ಕೆ ತಲೆವಾಗಿ ರಾಷ್ಟ್ರೀಯ ಆಂದೋಲನದಲ್ಲಿ ಧುಮುಕುತ್ತಾನೆ.

'ಸಮುದ್ರಯಾನ'ದಲ್ಲಿ ಪಡುವಣದ ಸಂಸ್ಕೃತಿಯ ಉನ್ನತಸ್ತರಗಳನ್ನು ಎತ್ತಿ ತೋರಿದ್ದಾರೆ. ಹೆಮ್ಮೆ ಪಡುವಂತಹ ಅವರ ಸಂಸ್ಕೃತಿಯ ನಿದರ್ಶನದ ಜೊತೆಗೆ ಇಂದಿನ ಅವರ ಭೌತಿಕ ಜೀವನ, ಕಾಮ-ಲಾಲಸೆಯ ಅಧಃಪತನದ ಜೀವನದ ವಿಕಾರ ರೂಪವನ್ನು ಎತ್ತಿತೋರಿದ್ದಾರೆ.

ಇವುಗಳ ಜೊತೆಗೆ ವರ್ಣಭೇದದ ಕಟು ಅನುಭವದ ಚಿತ್ರ ಗಮನಿಸು ವಂತಹದಿದೆ. ಪಾಶ್ಚಾತ್ಯರಲ್ಲಿ ಬೇರು ಬಿಟ್ಟ ಈ ವರ್ಣಭೇದ, ಭಾರತೀಯರಿ- ಗಿದ್ದ ಅವರ ಅವಜ್ಞೆ ತಿರಸ್ಕಾರಗಳಿಂದ ಜನಿಸಿ ಬರುವ ವಿರಸವನ್ನು ಯಶಸ್ವಿಯಾಗಿ ತೋರಿಸಿ ಕೊಟ್ಟಿದ್ದಾರೆ. ಪಾಶ್ಚಿಮಾತ್ಯರ ನಿಜ ಸಂಸ್ಕೃತಿಯನ್ನು ಅರಿಯುವ ಹೃದಯಸಂಸ್ಕಾರವಿಲ್ಲದೆ ಅವರ ಬಾಹ್ಯಾನುಕರಣವನ್ನು ಮಾಡುತ್ತ ಹೆಣ್ಣು, ಕುಡಿತ, ಭೋಗಗಳ ಸ್ವಚ್ಛಂದಜೀವನದಲ್ಲಿಯೇ ಸಂಸ್ಕೃತಿಯಿದೆಯೆಂದು ತಮ್ಮ ಬದುಕನ್ನು ಹಾಳುಮಾಡಿಕೊಂಡ ಭಾರತೀಯ ವಿದ್ಯಾರ್ಥಿಗಳ ಕತೆ ಚೆನ್ನಾಗಿ ಮೂಡಿ ಬಂದಿದೆ. ಅದನ್ನು ನಿರೂಪಿಸುವಾಗಿನ ಲೇಖಕರ ಹೃದಯದ ಕಳಕಳಿಯನ್ನು ನಾವು ಗುರುತಿಸಬಹುದು. ನಿಯೋಗಿಯಂತಹರು ಡಾಣಾಡಂಗುರವಾಗಿಯೇ ವಿಲಾಸಿಗಳಾಗಿದ್ದಾರೆ. ಮಾನವತೆಯನ್ನು, ಮಾನವೀಯ ಧರ್ಮವನ್ನು ಕಾಣ ಬಯಸಿದ ಶೀನೂ ಕೂಡ ಒಂದು ರೀತಿಯಿಂದ ಅವಕ್ಕೆ ಮನಸೋತಿದ್ದಾನೆ. ಇದು ವಿಷಾದದ ಸಂಗತಿಯಾದರೂ ಆತನ ವ್ಯಕ್ತಿತ್ವದ ತಳಹದಿ ಭದ್ರವಾಗಿಲ್ಲವೆಂಬು ದನ್ನು ನೆನಪುಮಾಡಿಕೊಂಡರೆ ಶೀನೂನ ವೃತ್ತಿಚಾಂಚಲ್ಯದ ಕಲ್ಪನೆ ನಮ ಗಾಗಬಹುದು.

ನವಾಬನಾಗಿ ಕುಣಿದ ಪಿಂಕರ್‌ಟನ್, ಸುಶಿಕ್ಷಿತನಿದ್ದರೂ ಸಾಮ್ರಾಜ್ಯ- ವಾದಿಯಾದ ಲೂಯಿ, ಕಾಮವೇ ಜೀವನದ ಸರ್ವಸ್ವವೆಂದು ತಿಳಿದ ಕುಮಾರಿ ವಾಚ್ಮಾ, ಮತ್ತು ನಿಯೋಗಿ, ಫ್ರೆಂಚ ಯುವತಿಗಾಗಿ ಹಾತೊರೆಯುತ್ತಿದ್ದ ಭಾರ- ತೀಯ ಆಫೀಸರ್,— ಹೀಗೆ ಅನೇಕ ತಾಣಗಳಲ್ಲಿ ಬದುಕಿನ ಭೀಭತ್ಸ ವಿಕಾರ ಗಳನ್ನು ಕಾಣಬಹುದು. ಹೀಗೆ ವಿಲಾಯತಿಯಲ್ಲಿಯ ಜೀವನದ ಸಂಸ್ಕೃತಿಯ ಅತ್ಯುನ್ನತ ಶಿಖರಗಳನ್ನು ಅಧಃಪತನದ ಪ್ರಪಾತವನ್ನು ಯಶಸ್ವಿಯಾಗಿ ನಿರೂಪಿ- ಸಿದ್ದಾರೆ.

ಅನುಭಾವಿಗಳಾದ ಜೇಮ್ಸ ದಂಪತಿಗಳು, ಆದರ್ಶವಾದಿಯಾದ ಎಂಡರ್- ಸನ್, ಸಾಮಾನ್ಯನಂತೆ ಜೀವಿಸುವ ಶ್ರೀಮಂತ ಮೀನುಗಾರ, ಚೀನದಲ್ಲಿ ಕ್ರೈಸ್ತ

ಧರ್ಮವನ್ನು ಸದ್ದಿಲ್ಲದೆ ಪ್ರಚಾರ ಮಾಡುತ್ತಿರುವ ರಿಚರ್ಡಸನ್, ಭಾರತೀಯ ತತ್ವಜ್ಞಾನದ ಬಗೆಗೆ ಆಸಕ್ತಿಯಿದ್ದ ಪ್ರೊ. ಬೀಚಿಂಗ, ಬೇಲಿ, ಮತ್ತು ಮಾರ್ಕ್ಸವಾದದ ಕರ್ಮದಂಪತಿಗಳು — ಇವರನ್ನು ಸಂದರ್ಶಿಸಿದಾಗೆಲ್ಲ ಜಗತ್ತಿನಲ್ಲಿ ಹೊಸ ಬದುಕಿನ ನೀರು ಹರಿದು ಬರಬಹುದೆಂಬ ಆಶೆಯ ಕಿರಣ ಮೂಡುತ್ತದೆ. ತ್ರಿವೇದಿ, ಅಂಬಾದಾಸ, ಕಾಮತರಂತಹ ವ್ಯಕ್ತಿಗಳಲ್ಲಿ ರಾಷ್ಟ್ರೀಯತೆ, ಕ್ರಿಯಾಶೀಲತೆಯನ್ನು ನಾವು ನೋಡಬಹುದಾಗಿದೆ.

ಸಮುದ್ರಯಾನವು ದೇಶವಿದೇಶಗಳಲ್ಲಿ ರಸ ಸಮರಸಗಳನ್ನು ಕಾಣಲು ಹವಣಿಸಿವೆ. ಈ ಭಾಗದಲ್ಲಿ ಬರುವ ಭಿನ್ನ ಭಿನ್ನ ವ್ಯಕ್ತಿಗಳು, ಘಟನೆ ಸನ್ನಿವೇಶಗಳನ್ನು ಈ ಉದಾತ್ತ ಗುರಿಯ ಸಾಧನೆಗಾಗಿಯೇ ಸೃಜಿಸಲಾಗಿದೆ.

ಕೊನೆಯದಾಗಿ ಬರುವ 'ನಿರ್ವಹಣ'ದಲ್ಲಿ ಎಲ್ಲ ಪಾತ್ರಗಳು ತಮ್ಮ ತಮ್ಮ ಪರಿಪೂರ್ಣತೆಯ ಕಡೆಗೆ ಸಾಗುತ್ತವೆ. ಸೆರೆಮನೆಯಲ್ಲಿದ್ದ ನರಹರಿ ವ್ಯಕ್ತಿ-ಸಮಾಜ-ವಿಶ್ವಗಳ ಸಮ್ಯಗ್‌ಜೀವನದ ಕನಸನ್ನು ಕಾಣುತ್ತಾನೆ, ಅಂಬಾದಾಸನೊಂದಿಗೆ ವಿಧಾಯಕ ಕಾರ್ಯಗಳ ಬಗೆಗೆ ಯೋಚಿಸುತ್ತಾನೆ. ರಾಷ್ಟ್ರ ಪುನರ್ನಿ-ರ್ಮಾಣದ ನಕ್ಷೆಯನ್ನು ಬರೆಯುತ್ತಾನೆ. ಕುಸುಮಾ ಸ್ವಾಮಿದಾಸರ ಪ್ರಭೆಯಿಂದ ತನ್ನ ವ್ಯಕ್ತಿತ್ವಕ್ಕೆ ಪೂರ್ಣಕಾಂತಿಯನ್ನು ತಂದುಕೊಂಡು ಬೆಳಗುತ್ತಾಳೆ. ಪತಿತಳಾದ ಪ್ರಮೀಳೆ ಮಾರ್ಗದರ್ಶನಕ್ಕಾಗಿ ಸ್ವಾಮಿದಾಸರೆಡೆಗೆ ಬರುತ್ತಾಳೆ. ಮೋಡಕರಿಗೆ ತನ್ನ ಪತಿತಜೀವನ ಗೊತ್ತಾದಾಗ ಅವರೊಂದಿಗೆ ಒರಟಾಗಿ ಮಾತನಾಡಿ ಪುಣೆಯಿಂದ ಖಾಸಗಾಂವಿಗೆ ಬರುತ್ತಾಳೆ. ತಂದೆಯ ಸಾವಿನಿಂದ ಅವಳ ಬದುಕು ಕತ್ತಲೆಯಿಂದ ತುಂಬುತ್ತದೆ. ಸ್ವಾಮಿದಾಸರು ಪೂರ್ಣಸಿದ್ಧಿಯನ್ನು ಪಡೆದು ಲಲಿತಾಂಬೆಯ ದರ್ಶನ ಪಡೆಯುತ್ತಾರೆ.

ಇಲ್ಲಿ ಮುಖ್ಯವಾದುದೆಂದರೆ ಶೀನೂನ ಜೀವನದ ಪರಿವರ್ತನೆ. ಪುನರ್ಜನ್ಮದಲ್ಲಿ ನಯುಗೆಯಿರದಿದ್ದರೂ ಪಾಶ್ಚಿಮಾತ್ಯಜೀವನಕ್ಕೆ ಮನಸೋತ ಆತ ಏಲಿಸಳ ಸಂಗವನ್ನು ಬಿಡಲಾರದವನಾಗಿ– ಮುಂದಿನ ತನ್ನ ಎಲ್ಲ ಜನ್ಮಗಳಲ್ಲಿ ಸುಶೀಲೆಯ ಸೇವೆ ಮಾಡುವದಾಗಿ ಹರಕೆ ಹೊರುತ್ತಾನೆ. ಭಾರತ ಸ್ವತಂತ್ರವಾದ ಮೇಲೆ ಅಲ್ಲಿ ಮೂಡಿಬರಬೇಕಾದುದು ಇಂಗ್ಲಂಡಿನ ಜೀವನವೆಂದು ಹೇಳುತ್ತಾನೆ. ಸುಶೀಲೆಯ ಅಂತಿಮಸ್ಥಿತಿ ಆತನನ್ನು ಸುದೈವದಿಂದ ಭಾರತಕ್ಕೆ ತರುತ್ತದೆ. ಹೆಂಡತಿ, ಪುಟ್ಟ ಉಷಾ, ತಂದೆ, ತಾಯಿ– ಈ ಎಲ್ಲ ಕರುಳಬಳ್ಳಿಯ ಸೆಳೆತಕ್ಕೆ ಸಿಕ್ಕರೂ ಯಾರಿಗೂ

ಸಂಬಂಧಿಸದವನಂತೆ, ಹೆಂಡತಿಯನ್ನು ಸಂತೈಯಿಸಿ 'ಶೋಗಬೇಕೆನ್ನುತ್ತೇನೆಂದ
ಹೊರಟುಬಿಡುತ್ತಾನೆ.

ಅನುತ್ತೀರ್ಣನಾದ ವಿಷ್ಣು ಭಾರತಕ್ಕೆ ಮರಳಿ ಸಿಡಿಲನ್ನು ಸಂಗಬೇಕಾ
ತ್ತದೆ. ಪ್ರಮೀಲೆಯನ್ನು ಕ್ಷಮಿಸಿ ಉಜ್ಜಯಿನಿಯನ್ನು ಸೇರುತ್ತಾನೆ. ಬಿಡುಗ
ಹೊಂದಿ ಬಂದ ನಂತರ ನರಹರಿಯು ತನ್ನ ಕನಸಿನ ಪೂರ್ಣಜೀವನ ಕೇಂದ್ರವನ
ನರ್ಮದೆಯ ತೀರದಲ್ಲಿ ಪ್ರಾರಂಭಿಸಲು ಸಂಕಲ್ಪಿಸುತ್ತಾನೆ. ಸಹಸ್ರಶೀರ್ಷನಾ
ಸಮಾಜಪುರುಷನಲ್ಲಿ ಮನುಕುಲದ ಅಧೋಗತಿಯನ್ನು ರೂಪಿಸಿ, ರಸಾತಳದಿಂ
ವಿಶ್ವ ಮತ್ತೆ ತಲೆಯೆತ್ತಿ ಮೆರೆಯಬೇಕೆಂಬ ಆಶಯವನ್ನು ವ್ಯಕ್ತಗೊಳಿಸಿದ್ದಾ
ಅದಕ್ಕಾಗಿ ಪೂರ್ಣ ಜೀವನಕೇಂದ್ರದ ಉನ್ನತ, ಆದರ್ಶವಾದ ಸಮಾಜ ವ್ಯವಸ್ಥೆಂ
ಚಿತ್ರವನ್ನು ಕಲ್ಪಿಸಿದ್ದಾರೆ. ಕೊನೆಗೆ ಮನುಕುಲದ ಸಾಕ್ಷಿತತ್ವ ಮಾರ್ಕಂಡ
ಮನುಕುಲವು ಘನಮುನ್ನಡೆಗೆ ಸಾಗಲಿಯೆಂದು ಆಶಿಸಿದ್ದಾರೆ. ಆ ದಿನದ ಬರ
ಗಾಗಿ ವಿಶ್ವ ಎಂದಿನಿಂದಲೋ ಹಂಬಲಿಸುತ್ತಿದೆ. ಆ ದಿನ ಎಂದು ಬಂದೀತೋ !

:: ೩ ::

ಇನ್ನು ಕಾದಂಬರಿಯ ಮೂಲ ತತ್ವ, ಉದ್ದೇಶ, ದರ್ಶನಗಳನ್ನು ಬಿಂ
ಸಿಲು ನೈತಾಳಿ ಬಂದ ಮಹತ್ವದ ಪಾತ್ರಗಳ ಸೃಷ್ಟಿಕಾರ್ಯ.

ವಿಸ್ತಾರವಾದ ಕಥಾನಕದಲ್ಲಿ ವಿವಿಧ ಬಗೆಯ ಜನಜೀವನದ ಚಿತ್ರವನ
ರೂಪಿಸುವದಕ್ಕಾಗಿ ಸೃಷ್ಟಿಸಿದ ಪಾತ್ರಗಳು ಅನೇಕವಾಗಿವೆ. ಇವು ಸಾಮಾ
ಪಾತ್ರಗಳೆಂದು ಕರೆಯಬಹುದು. ಅವು ಕೇವಲ ಜೀವನವಿಸ್ತಾರದ ಚಿತ್ರವನ
ತುಂಬಲು ಬಂದು ನಿಂತ ಪಾತ್ರಗಳು. ವಕೀಲ ದಾಸರಾಯರು, ಭೀಮಸೇನ
ಚಾರ್ಯರು ಶ್ರೀಮತಿ ತಾರಾಶಿಂಗ್, ಇವರೆಲ್ಲ ಈ ಗುಂಪಿಗೆ ಸೇರಿದವರು. ಒಂ
ವಿಶೇಷವಾದ ವಾತಾವರಣವನ್ನು ನಿರ್ಮಿಸುವ ಉದ್ದೇಶದಿಂದ ಬಂದ ಪಾತ್ರಗಳ
ಕೆಲವು ಇವೆ. ಅವುಗಳಲ್ಲಿ ನಿಯೋಗಿ, ರತನಭೈ, ಮೂರ್ತಿ,-ಮತ್ತು ಕುಮಾ
ಎಲಿಸರು ಸಮಾವೇಶರಾಗುತ್ತಾರೆ. ಅವರಲ್ಲಿ ಭಿನ್ನ ಭಿನ್ನ ಸ್ವಭಾವದ ಪರಿಗಳನ
ನಿರುಕಿಸಬಹುದು.

ಜೀವನಸಲ್ಲಿಯು ಒಂದೊಂದು ಬಗೆಯ ಮಾದರಿಯ ಗುರುತಾಗಿ ಕಾಣಿಸಿ
ಕೊಳ್ಳುವ ವ್ಯಕ್ತಿಗಳ ಗುಂಪಿಗೆ ನಾವು ಶ್ರೀಪಾದರಾಯ, ಗಣಪತಿರಾಯರು,
ನಾಂಸಿ, ಕಮಲಾಬಾಯಿ, ಮೇನಕೆ ಮೊದಲಾದವರನ್ನು ಸೇರಿಸುತ್ತೇವೆ.

ಕತೆಗೆ ಪೋಷಕವಾಗುವಂತೆ ಕೆಲ ಸಲ ರಸಾನುಭವಕ್ಕೆ ಪೋಷಕವಾಗು
ವಂತೆ ರಚಿತವಾದ ಜೀವಂತ ಪಾತ್ರಗಳು ಬರುತ್ತವೆ. ಆದರೆ ಆ ವ್ಯಕ್ತಿಗಳ
ಅಂತರಂಗಜೀವನದಲ್ಲಿ ಬೆಳವಣಿಗೆ ಕಂಡುಬರುವದಿಲ್ಲ. ಮೊದಲು ಮೂಡಿ ಬಂದ
ಸ್ತರದಲ್ಲಿಯೇ ಅವು ಕೊನೆಯ ವರೆಗೂ ನಿಲ್ಲುತ್ತವೆ. ಧೂರ್ತನಾದ ಭೀಮು,
ಲಾಲಸಿಯಾದ ಕುಡಚಿ, ಉಗ್ರರಾಷ್ಟ್ರೀಯವಾದಿಯಾದ ತ್ರಿವೇದಿ, ವಿಧಾಯಕ
ಕಾರ್ಯದ ಜಿಗುಟುತನವಿದ್ದ ಅಂಬಾದಾಸ ಇವರು ಅಂತಹ ವ್ಯಕ್ತಿಗಳಲ್ಲಿ ಪ್ರಮು-
ಖರು. ಅವರಲ್ಲಿ ಜಾನಕಿಬಾಯಿಯವರನ್ನು ಮರೆಯುವಂತಿಲ್ಲ. ಅವಳ ದರ್ಪ,
ದುರಭಿಮಾನ, ಛಲ, ಇವು ಕೊನೆಯ ವರೆಗೂ ಉಳಿದು ಬಂದಿವೆ. ಸಿಂಹಿಣಿ
ಯಂತೆ ಕ್ರೂರಳಾದ ಅವಳಿಗೆ ಅದೇ ತರದ ಕ್ರೂರ ಸಾವು ಬರುತ್ತದೆ.

ಮುಂದಿನ ಹಂತದಲ್ಲಿ ಕೆಲಮಟ್ಟಿಗೆ ಕೆಲ ವಿಕಾಸವನ್ನು ಪಡೆದ ಪಾತ್ರ
ಗಳನ್ನು ನೋಡಬಹುದು. ಕೂಳುಬಾಕನಾದ ತಿಪ್ಪ ಮುಂದೆ ವ್ಯಹಾರಬುದ್ಧಿ
ಯನ್ನು ಪಡೆಯುತ್ತಾನೆ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಜಾರಿದ ರಮಾಬಾಯರು
ಕೊನೆಕೊನೆಗೆ ಪರಿತಪಿಸುತ್ತಾರೆ. ವಿಷಮ ದಾಂಪತ್ಯದ ಫಲವಾಗಿ 'ಜಗತ್ತೆಂದರೆ
ವಿಷಮ'ವೆನ್ನುತ್ತಿದ್ದ ದೇಸಾಯರು ಕುಟುಂಬದ ಸಂಪರ್ಕಗಳಿಂದ ಐಪಷ್ಟು
ನಿರ್ಲಿಪ್ತರಾಗಿರುತ್ತಾರೆ; ಪುಣೆಗೆ ಹೋದಂದಿನಿಂದ, ಸ್ವಾಮಿದಾಸರ ಪ್ರಭಾವಲಯ
ದಲ್ಲಿ ಬಂದಂದಿನಿಂದ ಅವರು ಧ್ಯಾನಾಸಕ್ತರಾಗುತ್ತಾರೆ. ಜೀವನವನ್ನು ಒಂದು
ಮೋಜಿನ ಆಟವೆಂದು ತಿಳಿದುಕೊಂಡ ಮೋಡಕರು ವೃದ್ಧಾಪ್ಯದಲ್ಲಿ ಅಸಹನೆಯ
ವಿಷದಿಂದ ಲೇಪಿತರಾಗಿದ್ದಾರೆ.

ಇನ್ನು ಕಾದಂಬರಿಯ ಜೀವಾಳವಾಗಿ ಬೆಳೆದು ಬಂದ ಪಾತ್ರಗಳು. ಇವು
ಗಳಲ್ಲಿ ನರಹರಿ-ಕುಸುಮಾ ಶೀನೂ-ಸುಶೀಲಾ, ವಿಷ್ಣು-ಪ್ರಮೀಳೆಯರು ಸಮಾ
ವೇಶವಾಗುತ್ತಾರೆ. ಇವರೆಲ್ಲರ ಅಂತರಂಗದ ವಿಕಾಸ, ಬೆಳಕುಗಳಿಗೆ ಕಾರಣರಾದ
ಸ್ವಾಮಿದಾಸರ ವ್ಯಕ್ತಿತ್ವವು ಅತಿ ಮಹತ್ವದ್ದಾಗಿದೆಯೆನ್ನಬಹುದು.

ಕವಿಹೃದಯ, ಆದರ್ಶದ ಹಂಬಲವುಳ್ಳ ನರಹರಿ ತನ್ನ ಸುತ್ತಲಿನ ಕಹಿ,
ನೀರಸಗಳಿಗಾಗಿ ಕೊರಗುತ್ತಾನೆ. ಆ ಕೊರಗು ಆತನಲ್ಲಿ ಹೊಸ ಜೀವಿತದ ರೂಪ

ರೇಷೆಯನ್ನು ಮೂಡಿಸಲು ಪ್ರೇರಕವಾಗುತ್ತದೆ. ಆದರೆ ವಿರಸವನ್ನು ಹೋ
ಲಾಡಿಸುವಲ್ಲಿ ಪ್ರತ್ಯಕ್ಷವಾಗಿ ನರಹರಿಯು ಯತ್ನಿಸಿದ ಚಿತ್ರಗಳು ಹೆಚ್ಚಾ
ಬಂದಿದ್ದರೆ ಆತನ ಪಾತ್ರಕ್ಕೆ ನಿಜವಾದ ಘನತೆ ಬರಬಹುದಾಗಿತ್ತು. ಆತ
ಆದರ್ಶವಿಶ್ವವೆಲ್ಲ ಬರಿ ತತ್ವಗಳಲ್ಲಿ, ಹೃದಯಮಂಥನದಲ್ಲಿ ಉಳಿದಿದೆಯೆ
ಬಹುದು. ಆತ ಕೊನೆಯುವರೆಗೂ ಕಲ್ಪನೆಯ ಕೂಸಾಗಿಯೇ ಬದುಕುತ್ತಾ
ಆತ್ಮೋನ್ನತಿ, ಆತ್ಮವಿಕಾಸದ ಅನುಭಾವಿಯಾದ ನರಹರಿಯು ದುರಂತದ ಪ್ರತ್ಯ
ಬದುಕನ್ನು ಎದುರಿಸಲು, ಅದರೊಡನೆ ಹೋರಾಡಲು, ಬದುಕನ್ನು ತಿದ್ದ
ಇನ್ನೂ ಅಣಿಯಾಗಬೇಕಾಗಿದೆ. ಆದರ್ಶಲೋಕದ ನರಹರಿಯ ಮೇಲೆ ಇನ
ಒಂದು ದೊಡ್ಡ ಹೊಣೆಯಿದೆ. ತಾನು ಸೃಷ್ಟಿಸಿದ ಪೂರ್ಣಜೀವನಕೇಂದ್ರವನ
ಪ್ರತ್ಯಕ್ಷ ಪ್ರಯೋಗದಲ್ಲಿ ತರಬೇಕಾಗಿದೆ. ಆತನ ಹಂಬಲ, ಆದರ್ಶಪೂ
ವಾದುದು. ಆತ ಅಪೇಕ್ಷಿಸಿದಂತೆ ಸಮಾಜನಿರ್ಮಾಣವಾಗುವದು ಎಲ್ಲರಿಗ
ಇಷ್ಟ. ಆದರೆ ಈ ಹಂಬಲ, ಕನಸು, ಕೇವಲ ಭಾವನಾಲೋಕದ ಕನಸಾದೀತೆ
ಎಂಬ ಭಯ. ಪ್ಲೇಟೋನ ಆದರ್ಶರಾಜ್ಯ, ಗಾಂಧೀಜಿಯ ಸರ್ವೋದಯ
ರಾಮರಾಜ್ಯ, ವಿಶ್ವಕುಟುಂಬ ತತ್ವಗಳು, ರಸೆಲ್ಲರ ವಿಶ್ವಸರಕಾರದ ಹೊಂಗನ
ಇವುಗಳ ಮಾಲಿಕೆಗೆ ನರಹರಿಯ ಪೂರ್ಣಜೀವನಕೇಂದ್ರ ಸೇರುತ್ತದೆ. ವ್ಯ
ಸಮಾಜಗಳ ವಿಕಾಸ, ದೈವತ್ವದೆಡೆಗೆ ಊರ್ಧ್ವಮುಖಿಯಾಗಿ ಸಾಗುವ ಜೀ
ಸಂಪತ್ತು, ಇವುಗಳನ್ನು ಮನುಕುಲ ಪಡೆದಿದೆಯೇ? ವಿಶ್ವದ ಇತಿಹಾಸವನ
ನೋಡಿದಾಗ ಇದಕ್ಕೆ ನಿರಾಶೆಯ ಉತ್ತರ ದೊರೆಯುತ್ತಿದೆ. ಆದರೂ ನರಹ
ಯಲ್ಲಿಯ ಆ ತುಂಬುಜೀವನದ ಆದರ್ಶದ ಹಂಬಲವನ್ನು ನಾವು ಮೆಚ
ವಂತಹದು.

ಆತನ ಜೊತೆಗಾರ್ತಿಯಾದ ಕುಸುಮಾ ಆತನ ಪಡಿನೆಳಲು. ಆ
ಜೀವಿತೋದ್ದೇಶವೇ ಅವಳ ಬದುಕಿನ ಉದ್ದೇಶ; ಅವಳಿಗೆ ಸ್ವತಂತ್ರ ವ್ಯಕ್ತಿತ್ವ
ಅರಿವು ಮೂಡಿ ಆ ವ್ಯಕ್ತಿತ್ವದ ವಿಕಾಸಕ್ಕಾಗಿ ಮುಂದುವರಿಯಬೇಕೆಂಬ ಯತ್
ಪೂರ್ತಿಯಾಗಿ ಮೂಡಿಬಂದಿಲ್ಲ. ನರಹರಿ ಮತ್ತು ಸ್ವಾಮಿದಾಸರ ಪ್ರಭಾವ
ಬೆಳೆದಿದ್ದಾಳೆ. ಆದುದರಿಂದ ಕೊನೆಗೆ 'ನಿನ್ನ ಜೀವನದ ಗುರಿಯೇ ನನ್ನದು, ನಿ
ದಾರಿಯೇ ನನ್ನ ದಾರಿ'ಯೆಂಬ ಅನುವರ್ತಿಯಾಗಿ ಕಾಣಿಸಿಕೊಂಡಿದ್ದಾಳೆ. ಗ
ಶೀಲ, ಹಾಗೂ ಇನ್ನಿತರ ದೃಷ್ಟಿಯಿಂದ ಕುಸುಮಾನ ಪಾತ್ರ ಸುಂದರವಾಗಿದೆ.

ನರಹರಿಯಂತೆ ಕಾವ್ಯಜೀವಿಯಾದ ವಿಷ್ಣು ಸಾಮಾಜಿಕ ಪ್ರಜ್ಞೆಯಿಂದೊಡ
ೂಡಿದವನಾಗಿದ್ದಾನೆ. ನರಹರಿಯ ಉನ್ನತ ಆದರ್ಶ ಆತನಿಗೆ ಬಾರದು.
ರಿಹರಿಯ ಅನುಭಾವ, ತತ್ವಜ್ಞಾನಗಳ ಮೆರಗು ಈತನಿಗಿಲ್ಲ. ವಿದೇಶದಲ್ಲಿ
ೀವಿಸುವಾಗ ವ್ಯಕ್ತಿತ್ವವನ್ನು ಕಾಯ್ದುಕೊಂಡು ತನ್ನ ಅಂತಃಸತ್ವದ ಮಟ್ಟದಲ್ಲಿ
ುನ್ನುಗ್ಗುತ್ತಿರುವ ವಿಷ್ಣುವಿನ ಪಾತ್ರ ಚೆನ್ನಾಗಿದೆ. ಪರೀಕ್ಷೆಯಲ್ಲಿ ಅಯಶಸ್ವಿ
ಯಾಗಿ, ಭಾರತಕ್ಕ ಮರಳಿದ ಮೇಲೆ ದೊಡ್ಡದೊಂದು ಆಘಾತವನ್ನೆದುರಿಸ
ೇಕಾಗತ್ತದೆ. ಆಗ ಆತ ತೋರಿದ, ತಾಳ್ಮೆ, ವಿವೇಕ, ಅನಂತ ಕ್ಷಮೆ ಇವು
ೃಹಣೀಯವಾಗಿವೆ.

ಪ್ರಮೀಲೆ, ಚಿತ್ರಾಂಗದೆ. ಅವಳು ನಾಥನನ್ನು ಬಯಸಿದರೆ ವಿಧಿಯು
ವಳಿಗೆ 'ದಾಸ'ನನ್ನು ದಯಪಾಲಿಸಿದೆ. ಅವಳ ದಾಂಪತ್ಯ ನರಹರಿ-ಕುಸುಮಾ
ವರ ದಾಂಪತ್ಯದಂತೆ ಆತ್ಮಿಕ ಆದರ್ಶವನ್ನು ಪಡೆಯಲಾರದು; ಸಮುದ್ರಯಾನ
ಂತ ಮೊದಲು ಅವಳ ದಾಂಪತ್ಯ ಸರಸವಾಗಿರುತ್ತದೆ. ಪರಿಶುದ್ಧ ಪ್ರೇಮದ
ಾವಿತ್ರ್ಯದ ಅರಿವು ಸಂಪೂರ್ಣವಾಗಿದೆ. ಆದರೆ ಬಹುದಿನದ ವಿರಹ, ಕುಡಚಿಯ
ಕಸ್ಮಿಕ ಮೋಸಗಳು ಅವಳನ್ನು ಪ್ರೇಮದ ಉನ್ನತಪೀಠದಿಂದ ಕೆಳಗುರುಳಿಸಿವೆ.
ುತ್ತೆ ಮತ್ತೆ ಜಾರುವ ಪ್ರಮೀಲೆ "ಈ ದೇಹ ಮಾತ್ರ ನಿನಗೆ, ನನ್ನ ಆತ್ಮ ವಿಷ್ಣು
ಗೆ' ಎಂದು ಹೇಳಿಕೊಳ್ಳುವಲ್ಲಿ ಯಾವ ಅರ್ಥವೂ ತೋರುವದಿಲ್ಲ. ಅದು ಕೇವಲ
ುದ್ಧಿಯ ಹಂಚಿಕೆಯ ಮಾತೆಂದು ಎನಿಸುತ್ತದೆ. ಒಮ್ಮೆ ಪತಿತಳಾದುದಕ್ಕೆ ಪರಿ-
ಪಿಸಿದ ಅವಳು ಮುಂದೆ ಸಂಯಮದಿಂದಿರಲು ಸಾಧ್ಯವಿತ್ತೆಂದೆನಿಸುತ್ತದೆ. ಅದಿಲ್ಲ-
ದ್ದರೆ ಅವಳೂ ರಮಾಬಾಯಿಯ ಮಟ್ಟಕ್ಕೆ ಇಳಿದಳೆನ್ನಬೇಕೆ? ಆದರೂ ಅವಳ
ಾತ್ರದ ರುದ್ರತೆ ಮಾತ್ರ ಮನೋವೇಧಕವಾಗಿದೆ.

ಸುಶೀಲೆ ಕಲಿತವಳಾಗದಿದ್ದರೂ ಅವಳಲ್ಲಿ ಪ್ರಮೀಲೆಗಿರದ ಒಂದು ಹೆಚ್ಚಿನ
ೃದಯಸಂಸ್ಕಾರವಿದೆ. ಸಹನೆ, ತಪಸ್ಸುಗಳ ಮೂರ್ತಿಯಾಗಿ ಕಾಣಿಸಿಕೊಳ್ಳು
ತ್ತಾಳೆ. ಅವಳ ಬದುಕಿನಲ್ಲಿ ಶೀನೂನ ಕಲ್ಯಾಣವೊಂದೇ ಕಾಣಿಸಿಕೊಳ್ಳುತ್ತದೆ.
ೀನೂ ಅವಳಿಗೆ ದ್ರೋಹಮಾಡಿದಾಗ ತನ್ನ ದೈವವನ್ನೇ ಹಳಿದುಕೊಳ್ಳುತ್ತಾಳೆ.
ೂರದಲ್ಲಿ ಸದ್ದಿಲ್ಲದೆ ಕಾಲಿರಿಸಿ, ಬೆಳಗಿ ಹೋಗುವ ಈ ಪಾತ್ರ ಎಲ್ಲ ಸ್ತ್ರೀಪಾತ್ರ
ಳಲ್ಲಿಯೇ ಹೃದಯಸ್ಪರ್ಶಿಯಾಗಿದೆಯೆನ್ನಬಹುದು.

ದೈವವಾದಿ, ಮಾನವತಾವಾದಿಯಾದ ಶೀನೂ ಕಾದಂಬರಿಯ ಪ್ರಾರಂಭ-

ದಿಂದ ನರಹರಿಯ ಪ್ರಭಾವದಲ್ಲಿ ಬೆಳೆದರೂ ಆತನ ಜೀವಸಂಸ್ಕಾರದ ಬಿಸಿ ಬೆ
ಯಾಗಿದೆ. ಆಟ, ನೋಟ, ಮೋಜು, ವಿಲಾಸಗಳು ಆತನ ಸಹಜವಾದ ಆ
ರ್ಷಣೆಗಳಾಗಿವೆ. ಲೇಖಕರು ಹೇಳಿದಂತೆ "ದೈವವು ಅಲುಗಾಡಿಸದಂತಹ ತ
ಹದಿಯ ಮೇಲೆ ತನ್ನ ವ್ಯಕ್ತಿತ್ವವನ್ನು ಕಟ್ಟುವದು ಶೀನೂನಿಗೆ ಸಾಧ್ಯವಾಗಿದ್ದಿ
ಮೊದಲು ಕುಸುಮಾನನ್ನು ಕಂಡ ಆತನ ಹೃದಯ ತನ್ನ ಸುತ್ತಲೂ ಆದ
ಪ್ರೇಮದ ಜಾಲವನ್ನು ಹೆಣೆದುಕೊಳ್ಳುತ್ತದೆ. ನಿರಾಶೆಯಾದಾಗ ಸುಶೀಲೆಯ
ತೃಪ್ತಿಯನ್ನು ಕಾಣುತ್ತಾನೆ. ಆದರೂ ಕುಸುಮಾನ ಮೂರ್ತಿ ಆತನ ಹೃದ
ದಿಂದ ಅಳಿಸಿ ಹೋಗಿಲ್ಲ. "ಸುಶೀಲಾ ಮಲ್ಲಿಗೆ, ಕುಸುಮಾ ಒಂದು ನಕ್ಷತ್ರ'ವೆಂ
ತೂಗಿ ನೋಡಿಕೊಳ್ಳುತ್ತಾನೆ. ಇನ್ನೂ ಹೃದಯದಲ್ಲಿ ಸುಳಿಯುತ್ತಿದೆ. ಇಂಗ್ಲಂ
ಜೀವನಕ್ಕೆ ಮನಸೋತ ಶೀನೂ, ಆಗೀಗ ನಿಯೋಗಿಯ ಮಾತುಗಳಿಗೆ ಬಲಿಬಿ
ದಾರಿ ತಪ್ಪುತ್ತಾನೆಂದು ಅನಿಸುವದು. ಕೊನೆಗೆ ಆತ ಏ್ಯಲಿಸಳಲ್ಲಿ ಅನುರಕ್ತನಾ
" ಒಂದು ಹೃದಯ ಒಂದು ಪ್ರಾಣನಾಗಿ ", ಬದುಕಿನ ಜೊತೆಗಾರ್ತಿಯ
ಗುರುತಿಸುತ್ತಾನೆ.

ಇನ್ನು ಸ್ವಾಮಿದಾಸರು. ಶೂನ್ಯದ ಗರ್ಭದೊಳಗಿಂದ ಬಂದ ಬೆಳಕಿನ
ಬಂದಿದ್ದಾರೆನ್ನಬಹುದು. ಅವರದು ಸಾಧಕನ ಜೀವನ. ವೈಯಕ್ತಿಕ ಸಿದ್ಧಿ ಉನ್
ಉದ್ಧಾರಗಳನ್ನು ಪಡೆದುಕೊಂಡು ಪೂರ್ಣಜೀವಿಯಾಗಿ ಬಾಳಿದ ಇವರು, ನಾ
ಬಾಳನ್ನು ಕಂಪಿಸುವ ಕಾರ್ಯದಲ್ಲಿ ರಚನಾತ್ಮಕ ಪಾತ್ರವಹಿಸುವಂತೆ ಬೆಳೆದು ಬ
ದ್ದರೆ ಹೆಚ್ಚು ಯುಕ್ತವಾಗುತ್ತಿತ್ತು. ಹಿಂದೂ ರಾಜ್ಯವನ್ನು ಕಟ್ಟುವಾಗ ಬೆಳ
ಸಮರ್ಥ ರಾಮದಾಸರಂತೆ ಇವರು ತಮ್ಮ ತಪದ ಫಲವನ್ನು ನಾಡನ್ನು ಕಟ್ಟು
ರಲ್ಲಿ ಪ್ರತ್ಯಕ್ಷವಾಗಿ ನೀಡುವಂತಾಗಬೇಕಾಗಿತ್ತೆಂದೆನಿಸುತ್ತದೆ.

ಕೊನೆಯದಾಗಿ ಶೈಲಿ. ರಸೋಚಿತವಾಗಿ ಹರಿದು ಬಂದ ಲೇಖ
ಶೈಲಿಯಲ್ಲಿ ಅನೇಕ ಬಗೆಗಳನ್ನು ಕಾಣುತ್ತೇವೆ. ನಿಸರ್ಗವರ್ಣನೆ, ತತ್ವಚಿಂತ
ಅಂತರಂಗ ಮಥನದ ಸನ್ನಿವೇಶಗಳಲ್ಲಿ ಇವರ ಭಾಷೆಯ ಶೈಲಿ ವರ್ಣನ
ವಾಗಿ, ಚಿಂತನಪರವಾಗಿ ಕಾವ್ಯಮಯವಾಗಿ ಬೆಡಗು ಪಡೆದಿದೆ. ಸಂಭಾಷಣೆಯ
ಸುಸಂಸ್ಕೃತ, ಹಾಗು ಬಳಕೆಮಾತುಗಳ ಹದವು ಕಾಣಿಸಿಕೊಂಡಿದೆ.

ಕಾದಂಬರಿಯ ಘನತೆ, ಅದರ ಐತಿಹಾಸಿಕ ಮಹತ್ವ ಹಾಗೂ ಲೇಖ
ವ್ಯಕ್ತಿತ್ವ ವಿಕಾಸದಲ್ಲಿದೆ. ಅದಕ್ಕಾಗಿಯೇ ಕಾದಂಬರಿಯ ಹೊದಿಕೆಯ ಮೆ

ಪ್ರಕಟವಾಗಿರುವ ಈ ವಿಮರ್ಶೆಯ ಕೆಲವು ಅಭಿಪ್ರಾಯಗಳನ್ನು ಉದಾಹರಿಸಬಹುದು.

‘ಸಮರಸವೇ ಜೀವನ’ ಇದು ಉತ್ತರ ಕರ್ನಾಟಕದ ಜನಜೀವನದ ಸರ್ವತೋಮುಖವಾದ ಬೆಳವಣಿಗೆಯನ್ನು, ಅಂತಃಸತ್ವವನ್ನು, ನೆಲಸು-ಹಬ್ಬುಗೆಗಳನ್ನು, ಸಮಗ್ರವಾಗಿ ವಿವರವಾಗಿ ನಿರೂಪಿಸುವ ಏಕಮೇವ ಕಾದಂಬರಿ. ನೆಲದಲ್ಲಿ ಹುಟ್ಟಿದ ಸಸಿ, ಮರವಾಗಿ ಬೆಳೆದು, ನಕ್ಷತ್ರಗಳೊಡನೆ ಗೆಳೆತನ ಬೆಳೆಸಿದಂತೆ ಈ ಕಾದಂಬರಿಯಲ್ಲಿ ಚಿತ್ರಿಸಲಾದ ಜೀವನವಿಕಾಸ ನೆಲದ ಸತ್ವದಲ್ಲಿ ನಂಬುಗೆಯಿಂದ ನಿಂತು, ಆಕಾಶದ ದಿವ್ಯತೆಯ ಕಡೆಗೆ ಮೊಗ ಚಾಚಿದೆ. ಜೀವನದ ಉಗಮದಲ್ಲಿ, ಮುಕ್ತಾಯದಲ್ಲಿ ಅಡಗಿದ ಅದೃಷ್ಟ ಶಕ್ತಿಯ ಅಗಮ್ಯತೆಯ ಕಾವ್ಯದರ್ಶನ ಇಲ್ಲಿ ತಾನೇ ತಾನಾಗಿಯೇ ಹರಹಿಕೊಂಡಿದೆ. ಕಥಾನಕ, ಸಂವಿಧಾನ, ಪಾತ್ರಸೃಷ್ಟಿ, ತಂತ್ರ, ಶೈಲಿ, ಭಾಷೆ ಇವುಗಳ ನಾವೀನ್ಯ ಹಾಗೂ ವೈವಿಧ್ಯಗಳನ್ನು ನೋಡಿದರೆ, ಹೊಸಕಾಲದ ಸಾಹಿತ್ಯ, ಪ್ರಯೋಗ ಹಾಗೂ ವಿಮರ್ಶೆ ಇವುಗಳ ಇತಿಹಾಸವೇ ಇಲ್ಲಿ ಮೂಡಿದಂತೆನಿಸುತ್ತದೆ. ಈ ಕಾದಂಬರಿಯಲ್ಲಿ ತುಂಬಿ ಹರಿಯುವ ಜೀವಪ್ರವಾಹದಲ್ಲಿ ಮಿಂದು ಬಂದ ಪಾತ್ರಗಳಿಗೆ ಸಜೀವತೆಯೊಂದಿಗೆ ಭಾವ ಬುದ್ಧಿಗಳ ಅಪೂರ್ವ ಕಾಂತಿ ಇದೆ. ಇಲ್ಲಿಯ ಜೀವನಚಿತ್ರದಲ್ಲಿ ವಾಸ್ತವಿಕತೆಯೊಂದಿಗೆ ಅಂತಃಪ್ರಜ್ಞೆಯ ದರ್ಶನವೂ ಇದೆ; ಇಲ್ಲಿಯ ಭಾವಗಳಲ್ಲಿ ಮನೋವೇಧಕತೆಯ ಹಿಂದೆ ರಸಸ್ಪರ್ಶವಿದೆ; ತತ್ವನಿರೂಪಣೆಯಲ್ಲಿಯ ಬುದ್ಧಿವಂತಿಕೆಯಲ್ಲಿಯೂ ಅಂತಃಕರುಣದ ಎಳೆತವಿದೆ, ಇಲ್ಲಿಯ ಕಲೆ ಜೀವನದಿಂದಲೇ ಸಹಜವಾಗಿ ಮೂಡಿಬಂದಿದ್ದರೂ ಜೀವನಕ್ಕೇ ಮರಳಿ ಸ್ಫೂರ್ತಿ, ಕಾಂತಿ, ಜ್ಞಾನವನ್ನು ದಾನಮಾಡುವ ಸಾಮರ್ಥ್ಯವನ್ನು ಪಡೆದುಕೊಂಡಿದೆ. ವಾಸ್ತುಶಿಲ್ಪದ ವಿಸ್ತಾರ, ಎತ್ತರ ಹಾಗೂ ಭದ್ರತೆಗಳು ಈ ಕೃತಿಯ ಸಹಜಲಕ್ಷಣಗಳಾಗಿವೆ. ಗಾತ್ರಕ್ಕೆ ತಕ್ಕ ಗುಣ ಈ ಕೃತಿಯಲ್ಲಿದೆ ಎನ್ನುವದಕ್ಕಿಂತ, ಇದರ ಗುಣ ತನಗನುಕೂಲವಾದ ಗಾತ್ರವನ್ನು ಪಡೆದಿದೆ ಎನ್ನಬಹುದು. ಅಂತೆಯೇ ಈ ಕಾದಂಬರಿಯು ಸಿದ್ಧಿ ನಾಡಿನ ಸಿದ್ಧಿಗಳಲ್ಲೊಂದಾಗಿದೆ; ಈ ಯುಗದ ಸಂಸ್ಕೃತಿಯ ಮೇಲುಮಟ್ಟವನ್ನು ಸೂಚಿಸುವ ಅಂಕಿತಗಳಲ್ಲೊಂದಾಗಿದೆ.

---

## ಶ್ರೀ. ಗೋಕಾಕರ ವಿಮರ್ಶಾಸಾಹಿತ್ಯ

ಕವಿ, ನಾಟಕಕಾರ, ಕಾದಂಬರಿಕಾರ, ವಾಗ್ಮಿ, ನುರಿತ ಪ್ರಾಧ್ಯಾಪಕ, ಪಂಡಿತ,–ಮತ್ತು ಎಲ್ಲಕ್ಕೂ ಹೆಚ್ಚು ತುಂಬಾ ಸುಸಂಸ್ಕೃತ ವ್ಯಕ್ತಿಯೆಂದು ಖ್ಯಾತಿವೆತ್ತ ಶ್ರೀ.ವಿನಾಯಕ ಕೃಷ್ಣ ಗೋಕಾಕರು ಕನ್ನಡ ಸಾರಸ್ವತಪ್ರಪಂಚಕ್ಕೆ ನೀಡಿದ ವಿಮರ್ಶಾ ಸಾಹಿತ್ಯವು ಅನನ್ಯಸಾಧಾರಣವಾದುದು. ಶ್ರೀ.ಗೋಕಾಕರ ಮನಸ್ಸಿನ ಒಲವು, ಸಹೃದಯತೆ, ಆಳವಾದ ಪಾಂಡಿತ್ಯ ಮತ್ತು ಪರಿಶ್ರಮಗಳು ಅವರ ವಿಮರ್ಶಾಲೇಖನಕ್ಕೆ ತೀರ ಹೆಚ್ಚಿನ ಸ್ಥಾನವನ್ನು ಕಲ್ಪಿಸಿಕೊಟ್ಟವೆ. ಹೊಸಗನ್ನಡ ವಿಮರ್ಶಾಶಾಸ್ತ್ರದ ಶ್ರೀಕಾರವನ್ನು ಹಾಕಿಕೊಟ್ಟು, ಆ ಶಾಸ್ತ್ರಕ್ಕೆ ಹೊಸ ಹೊಸ ತತ್ತ್ವಪ್ರಣಾಲಿಗಳು ಸೇರುವಂತೆ ಮಾಡಿದ ಶ್ರೇಯಸ್ಸು ಶ್ರೀ.ಗೋಕಾಕರಿಗಿದೆ.

ಹರಿತವಾದ ಪ್ರತಿಭೆ, ಸ್ಪಷ್ಟ ವಿಚಾರಸರಣಿ ಮತ್ತು ಅನನ್ಯಸಾಧಾರಣವಾದ ವ್ಯುತ್ಪತ್ತಿ— ಇವು ಕನ್ನಡ ವಿಮರ್ಶಾ ಸಾಹಿತ್ಯಕ್ಕೆ ಶ್ರೀ. ಗೋಕಾಕರು ಕೊಟ್ಟ ಕಾಣಿಕೆ. ಇಂದಿನ ಕನ್ನಡ ಸಾಹಿತ್ಯದಲ್ಲಿ ವಿಮರ್ಶಕನಾಗುವಷ್ಟು "ಅಧಿಕಾರ"ವನ್ನು ಬೇರೆ ಯಾವ ಲೇಖಕರೂ ಪಡೆದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

ಶ್ರೀ.ಗೋಕಾಕರು ಪ್ರೀತಿಸಿದ್ದು ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯಗಳನ್ನು. ವಾತಾವರಣ ಮತ್ತು ಅವರ ಪರಿಶ್ರಮಗಳು ಸಂಸ್ಕೃತ ಪಾಂಡಿತ್ಯವನ್ನು ಅವರಿಗೆ ಒದಗಿಸಿಕೊಟ್ಟುವು. ಈ ರೀತಿ ಈ ಮೂರು ಸಾಹಿತ್ಯಗಳು ಮುಪ್ಪುರಿಗೊಂಡ ಅವರ ಮನಸ್ಸಿನ ಅಗ್ನಿಕುಂಡದಲ್ಲಿ ಶುದ್ಧವಾಗಿ ಕನ್ನಡ ವಿಮರ್ಶಾಶಾಸ್ತ್ರ ದೇದೀಪ್ಯಮಾನವಾಗಿ ರಾರಾಜಿಸುತ್ತಿದೆ. ಇಂಗ್ಲಂಡಕ್ಕೆ ಹೋಗಿಬಂದವರೆಲ್ಲ ಥೇಮ್ಸ್ ನದಿಯ ದಂಡೆಯ ಮೇಲೆಯೇ ತಮ್ಮ ಆತ್ಮವನ್ನು ಹಾರಿಬಿಟ್ಟು, ಬರೀ ದೇಹವನ್ನು ಮಾತ್ರ ಹೊತ್ತುಕೊಂಡು ನಮ್ಮ ದೇಶಕ್ಕೆ ಮರಳುವರೆಂದು ಸಾಮಾನ್ಯವಾಗಿ ಹೇಳುವದುಂಟು. ಆದರೆ ಗೋಕಾಕರ ಸಂಸ್ಕೃತಿ ಹಾಗಲ್ಲ. ಅವರ ಔನ್ನತ್ಯವು ಪಶ್ಚಿಮದ ಪ್ರತಿಭೆಯನ್ನು ಕಂಡಿದ್ದರೂ, ಅದು ಕನ್ನಡದ ಮತ್ತು ಸಂಸ್ಕೃತದ ಗಟ್ಟಿಯಾದ ತಳಹದಿಯ ಮೇಲೆ ಸ್ಥಿರವಾಗಿದೆ. ಅಂತಲೇ, ಭಾರತೀಯ ಕಾವ್ಯಮೀಮಾಂಸೆ ಮತ್ತು ಪಡುವಣ ಕಾವ್ಯಶಾಸ್ತ್ರಗಳಲ್ಲಿಯ ಸಾಮ್ಯ-ವೈಷಮ್ಯಗಳನ್ನು ಅವರು

ಸಮರ್ಥವಾಗಿ ಗ್ರಹಿಸಬಲ್ಲರು. ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಕಾವ್ಯಶಾಸ್ತ್ರಗಳ ವೈವಿಧ್ಯ, ಸಮನ್ವಯ ಮತ್ತು ವಿಲಾಸಗಳನ್ನು ತೋರಿಸಿದ ಶ್ರೇಯಸ್ಸು ಶ್ರೀ. ಗೋಕಾಕರಿಗಿದೆ

ವಿಮರ್ಶೆ ಒಬ್ಬ ವ್ಯಕ್ತಿಯ ಇಲ್ಲವೆ ಅವನ ಕಾವ್ಯದ ಪರೀಕ್ಷಣವಾಗಬಹುದು (individual appreciation); ಇಲ್ಲವೆ ಇಡೀ ಶಾಸ್ತ್ರದ ವೀಕ್ಷಣ- ವಿಮರ್ಶೆ (survey of science of criticism.) ಆಗಬಹುದು; ಇಲ್ಲವೆ ತುಲನಾತ್ಮಕ ವಿವೇಚನೆಯಾಗಬಹುದು (comparative criticism); ಅಥವಾ ಐತಿಹಾಸಿಕ ಸಮಾಲೋಚನೆಯಾಗಬಹುದು (historical criticism.); ಶ್ರೀ. ಗೋಕಾಕರು ಈ ಯಾವ ವಿಭಾಗದಲ್ಲಿಯೂ ಪರಿಣತಹಸ್ತರು.

ಅಂತಲೇ ವಿಮರ್ಶಾಶಾಸ್ತ್ರದ ಮೂಲಭೂತ ಪ್ರಶ್ನೆಗಳ ಸುಂದರವಾದ ವಿವೇಚನೆಯು ಅವರ ಕೃತಿಗಳಲ್ಲಿದೆ. ಕಾವ್ಯವೆಂದರೇನು ? ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಕಾವ್ಯದೃಷ್ಟಿಗಳಲ್ಲಿರುವ ಸಾಮ್ಯ-ವೈಷಮ್ಯಗಳೇನು? ಮಹೋನ್ನತ ಕಾವ್ಯವು ಯಾವುದು? ಸೌಂದರ್ಯವೆಂದರೆ ಏನು ? ಗದ್ಯ ಮತ್ತು ಪದ್ಯಗಳಲ್ಲಿರುವ ಸಂಬಂಧವೇನು ? ಕಾವ್ಯ ಮತ್ತು ಛಂದಸ್ಸಿನ ಹೊಂದಿಕೆ ಯಾವ ಬಗೆಯದು? "ನವ್ಯಕಾವ್ಯ"ವೆಂದರೆ ಯಾವುದು ? ಅದರ ಅವಶ್ಯಕತೆ ಉಂಟೇ?– ಮೊದಲಾದ ಕಾವ್ಯ ವಿಷಯಕ ಹತ್ತಾರು ಪ್ರಶ್ನೆಗಳನ್ನು ಅವರು ಅಧಿಕಾರಯುತವಾಗಿ ವಿವರಿಸಿದ್ದಾರೆ. ಅದರ ಚರ್ವಿತಚರ್ವಣವು ಇಲ್ಲಿ ಅನವಶ್ಯಕವಾದುದು.

ಕಾವ್ಯದ ಬಗ್ಗೆ ಚರ್ಚಿಸಿದಂತೆಯೇ ಲೇಖಕರು ವಿಮರ್ಶೆ ಎಂದರೇನು? ವಿಮರ್ಶಕನ ಸಲಕರಣೆ ಯಾವುದು? ಅವನ ಕರ್ತವ್ಯವೇನು? ಕವಿ ವಿಮರ್ಶಕ ನಿದ್ದಾನೆಯೇ, ಅನುಭಾವಿ ಇದ್ದಾನೆಯೇ? ಎಂಬ ತುಂಬಾ ಮಹತ್ವದ ಪ್ರಶ್ನೆಗಳನ್ನೂ ತಮ್ಮ ಲೇಖನಗಳಲ್ಲಿ ಚರ್ಚಿಸಿದ್ದಾರೆ. ಕಾವ್ಯದಲ್ಲಿ ವಿಮರ್ಶೆಯ ಸ್ಥಾನದ ಬಗ್ಗೆ ಶ್ರೀ.ಗೋಕಾಕರು ಹೇಳಿದ ಮಾತುಗಳು ಮನನೀಯವಾಗಿವೆ: "ವಿಮರ್ಶೆಗೂ ಸಹ ಒಂದು ನಿರ್ಮಾಣಶಕ್ತಿಯಿದೆ.... ವಿಮರ್ಶಕರು ಕವಿಯ ವಂದಿಮಾಗಧರೆಂದು ಕೆಲವರು ತಿಳಿದಿರುವುದುಂಟು; ಇಲ್ಲವೆ ನಿಂದಕರೆಂದು ಹಲವರು ಆಡಿಕೊಳ್ಳುವುದುಂಟು. ಆದರೆ ವಿಮರ್ಶೆಗೂ ಅಸ್ಖಲಿತವಾದ, ಅನನ್ಯವಾದ ಒಂದು ವಾಣಿ ಇದೆ. ಅದು ಮೀಟುವ ತಂತಿಯನ್ನು ಇನ್ನುಳಿದ ಯಾವ ಸಾಹಿತಿಯೂ ಮೀಟಲಾರನು. ಮೋಹದ ಮಾಯೆಯನ್ನು ಕಿತ್ತೊಗೆದು ಸಮತಾವಾದವನ್ನು ನಿಷ್ಪಕ್ಷ

ಸಾತಿಯಾಗಿ ಸಾರುವ ಕೃಷ್ಣನ ಪಾಂಚಜನ್ಯವು ವಿಮರ್ಶೆಗೆ ಸಲ್ಲುವುದು. ವಿಮ ರ್ಶೆಯು ಪ್ರಗತಿ-ಯುಗದಲ್ಲಿಯೂ ಜನಿಸುವ ಪ್ರತಿಭಾಶಾಲಿಗಳನ್ನು ಸಾಹಿತ್ಯ ರಂಗಕ್ಕೆ ಕರೆಯುವತುತೂರಿ!* ನೂರು ಕೀಳು ಕವಿಗಳಿಗಿಂತಲೂ ಓರ್ವ ಶ್ರೇಷ್ಠ ವಿಮರ್ಶಕನು ಲೇಸು. ಒಂದು ರಾಷ್ಟ್ರದ ಜೀವನವನ್ನೂ ಸಾಹಿತ್ಯವನ್ನೂ ಉಜ್ವಲ ತರವಾಗಿ ಮಾಡಲು ವಿಮರ್ಶೆಯು ಅತ್ಯವಶ್ಯ....".

ನಾಡಿನ ಮತ್ತು ಸಾಹಿತ್ಯದ ಅಂಥ ಹಿರಿಯ ಮುಖಂಡತ್ವವನ್ನು ವಹಿಸ ಬೇಕಾದರೆ ವಿಮರ್ಶಕನಲ್ಲಿರಬೇಕಾದ ಗುಣಗಳಾವುವು ?

ವಿಮರ್ಶಕನಿಗೆ ಹರಿತವಾದ ಪ್ರತಿಭೆಯಿದ್ದಷ್ಟೇ,ವಿವೇಕಯುಕ್ತವಾದ ವಿವೇ ಚನಾಶಕ್ತಿಯು ಬೇಕು. ಭಿನ್ನ ಭಿನ್ನ ದೇಶದ ಸಾಹಿತ್ಯಗಳ ನಿಕಟವಾದ ಪರಿಚಯ ವಿರಬೇಕು. ಎಲ್ಲಕ್ಕೂ ಹೆಚ್ಚು ಸಹೃದಯತೆ ಬೇಕು. ತನ್ನ ಕವಿಯ ಬಗ್ಗೆ ಸಹೃದಯತೆ ಇರದ ವಿಮರ್ಶಕನಿಗೆ ಕಾವ್ಯವಿಮರ್ಶೆಯ ಅಧಿಕಾರವೇ ಇಲ್ಲವೆಂದು ಥ್ಯಾಕರೇ' ಮಹಾಶಯನು ಹೇಳಿದ್ದಾನೆ. ಅಂತಲೇ ನಮ್ಮವರು ವಿಮರ್ಶಕನನ್ನು ಸಹೃದಯ-ರಸಿಕನೆಂದು ಕರೆದರು. ಕವಿ ಕಾವ್ಯವನ್ನು ಗ್ರಥಿಸಿದರೆ, ಅದರ ಸೌರಭವನ್ನು ಎತ್ತಿತೋರುವ ಹೊಣೆ ವಿಮರ್ಶಕನಿಗಿದೆ."ಕವಿಃ ಕರೋತಿ ಕಾವ್ಯಾನಿ; ರಸಂ ಜಾನಾತಿ ಪಂಡಿತಃ". "ಕಟ್ಟಿಯುಮ್ ಏನೊ ಮಾಲೆಗಾರನ ಪೊಸ ವಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ?" ಎಂದು ನಮ್ಮ ಪ್ರಾಚೀ ನರು ಹೇಳಿದ್ದುಂಟು. ಅರಸಿಕರೆದುರು ತಮ್ಮ ಕಾವ್ಯವನ್ನು ವಿವರಿಸುವ ದೌರ್ಭಾಗ್ಯ ವನ್ನು ತಂದು ಕೊಡಬೇಡವೆಂದು ನಮ್ಮ ಪ್ರಾಚೀನ ಕವಿಗಳು ದೇವರನ್ನು ಪ್ರಾರ್ಥಿಸಿದ್ದಾರೆ:

"ಅರಸಿಕೇಷು ಕವಿತ್ವನಿವೇದನಮ್
ಶಿರಸಿ ಮಾ ಲಿಖ; ಮಾ ಲಿಖ; ಮಾ ಲಿಖ"

ಆದ್ದರಿಂದ ವಿಮರ್ಶಕನಿಗೆ ಕವಿ ಮಹತ್ವವಲ್ಲ; ಕೃತಿ ಮಹತ್ವ. ಬರೆವ ಕೈ ಮಹತ್ವವಲ್ಲ; ಸಿದ್ಧವಾದ ಕಾವ್ಯ ಮಹತ್ವದ್ದು. ಇದಕ್ಕಾಗಿ ಶ್ರೀ.ಗೋಕಾಕರು ಕೊಟ್ಟ ಸಾದೃಶ್ಯವು ತುಂಬಾ ಮನೋಜ್ಞವಾಗಿದೆ. ವಿಮರ್ಶಕನು ರೇಲ್ವೆ ಟಿಕೇಟ ಮಾಸ್ತರ ಇದ್ದ ಹಾಗೆ. ಟಿಕೇಟನ್ನು ಮಾರುತ್ತಿರುವ ರೇಲ್ವೆ ಮಾಸ್ತರರಿಗೆ ಹಣ ವನ್ನು ಕೊಡುವ ಕೈ ಸರ್ಜಕೋಟು ಧರಿಸಿದೆಯೋ, ಸಾದಾ ಹತ್ತಿಯ ಅರಿವೆ

---

* 'ಸಾಹಿತ್ಯದಲ್ಲಿ ಪ್ರಗತಿ' ಪು. ೭

ಯನ್ನು ಧರಿಸಿದೆಯೋ ಎಂಬುದು ಮಹತ್ವವಲ್ಲ; ಆದರೆ ಪ್ರಯಾಣಿಕನು ಹೋಗ ಬೇಕೆಂದು ಬಯಸಿದ ಊರು ಮತ್ತು ಅದಕ್ಕಾಗಿ ಅವನು ಕೊಡುವ ಹಣ ಮುಖ್ಯ ವಾದುವು. ಅಂತಲೇ ಅವನು ತನ್ನ ಗೋಣನ್ನು ಸಹ ಹೇಲಿತ್ತದೆ ತನ್ನ ವ್ಯಾಪಾರ ದಲ್ಲಿ ತೊಡಗಿರುತ್ತಾನೆ. ಅರ್ಥಾತ್, ಸಹೃದಯಿ ಇದ್ದಷ್ಟೇ ವಿಮರ್ಶಕನು ನಿಷ್ಪಕ್ಷ ಪಾತಿಯಾಗಿದ್ದಾನೆ. ಅವನಿಗೆ ಮಹತ್ವವೆನಿಸುವವು ಕವಿಯ ಪೂಣ್ಕೆ (ಆದರ್ಶ) ಮತ್ತು ಆದರ ಸಿದ್ಧಿ.

ಸಾಮಾನ್ಯವಿಮರ್ಶಕನ ಸ್ಥಿತಿ ಹೀಗಿದ್ದರೆ, ಕಾವ್ಯವಿಮರ್ಶಕನಿಗಂತೂ ಇದಕ್ಕೂ ಒಂದು ಹೆಚ್ಚಿನ ಗುಣ ಬೇಕು. “A critic of poetry should himself be a poet ” ಎಂದು ‘ಎಬರ್‌ಕ್ರೋಂಬಿ’ ‘ಗ್ಯಾರೆಡ್’ ಮೊದಲಾದ ವಿಮರ್ಶಕರು ಹೇಳುತ್ತಾರೆ. ಕಾವ್ಯವಿಮರ್ಶಕನಿಗೆ ಕಾವ್ಯಗರ್ಭದ ಸುಖದುಃಖಗಳ ಪರಿಚಯವಿರ ಬೇಕು.

ಈ ಎಲ್ಲ ಸಲಕರಣೆಗಳನ್ನು ಪಡೆದವರೂ, ಆಂಗ್ಲ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳ ಆಳವಾದ ಅಭ್ಯಾಸವುಳ್ಳವರೂ ಆದ ಶ್ರೀ. ಗೋಕಾಕರು ವಿಮರ್ಶಾ ಸಾಹಿತ್ಯದ ಯಾವ ವಿಭಾಗವನ್ನು ಮುಟ್ಟಿದ್ದರೂ ಅದನ್ನು ಬಂಗಾರವನ್ನಾಗಿ ಮಾಡಿದ್ದಾರೆ. ಕಾವ್ಯ, ವಿಮರ್ಶೆ, ಮಹೋನ್ನತಿ, ವಿಡಂಬನ ಮೊದಲಾದಂಥ ಮೂಲಭೂತ ಪ್ರಶ್ನೆಗಳ ವಿಷಯವೇ ಇರಲಿ; ಇಲ್ಲವೆ ನವ್ಯತೆ ಮೊದಲಾದ ತುಲನಾತ್ಮಕ ಪಾಂಡಿತ್ಯದ ವಿಷಯವೇ ಇರಲಿ, ಅಥವಾ ರತ್ನಾಕರವರ್ಣಿ, ಷೆಲಿ, ಬೇಂದ್ರೆ, ಪುಟ್ಟಪ್ಪ, ಮಾಸ್ತಿ— ಇವರಾರ ಕೃತಿಗಳ ಪರೀಕ್ಷಣವೇ ಇರಲಿ— ಇವೆಲ್ಲವುಗಳ ಬಗ್ಗೆಯೂ ಅವರು ಅಧಿಕಾರಯುತವಾಗಿ ರಸಪ್ರಪೂರ್ಣವಾಗಿ ಪ್ರತಿಪಾದಿಸಬಲ್ಲರು.

ಬರವಣಿಗೆಯ ದೃಷ್ಟಿಯಿಂದ ವಿಚಾರಮಾಡಿದಾಗ, ಶ್ರೀ. ಗೋಕಾಕರಿಗೆ ಒಂದೆರಡು ಮಾತುಗಳ ಬಗ್ಗೆ ಬಹಳ ಪ್ರೀತಿ ಇದ್ದ ಹಾಗೆ ಕಾಣಿಸುತ್ತದೆ. ಶೆಕ್ಸಪೀ-ಯರನಿಗೆ ಶ್ಲೇಷಚಮತ್ಕೃತಿಗಳಲ್ಲಿ ಕಂಡು ಬಂದ ಆಸ್ಥೆ, ಶ್ರೀ. ಪುಟ್ಟಪ್ಪನವರಲ್ಲಿ ಹಲವು ಶಬ್ದಗಳ ಬಗ್ಗೆ ಕಂಡುಬರುವ ಪ್ರೀತಿ, ಶ್ರೀ. ಗೋಕಾಕರಲ್ಲಿಯೂ ಶಬ್ದ ಛಲದ ಬಗ್ಗೆ ಕಂಡುಬರುತ್ತಿದೆಯೆಂದು ಹೇಳಬಹುದು. ‘ಮೆಕಾಲೆ’ ವಾಕ್ಯಗಳ ಸಮತೋಲಕ್ಕೆ (balance) ಮಾರುಹೋದಂತೆ ಶ್ರೀ. ಗೋಕಾಕರು ಅನೇಕ ಸಲ ಒಂದೇ ವಿಧ ಕೇಳಿಸುವ ಶಬ್ದಗಳನ್ನು ಉಪಯೋಗಿಸುವುದರಲ್ಲಿ ಹೆಚ್ಚು ಆಸ್ಥೆ ವಹಿಸುತ್ತಾರೆ.

ವ್ಯಂಜನವೇ ಕಾವ್ಯಭಾಷೆಯು ತನ್ನ ಕಣ್ಣಿಗೆ ಹಚ್ಚಿಕೊಂಡ ಅಂಜನ ( ಸಾಹಿತ್ಯದಲ್ಲಿ ಪ್ರಗತಿ. ಪು. ೨೯ ). ಯಾವ ಮಾತಿಗೂ ವಿರುದ್ಧವಾದ ಅಲಂಕಾರಕ್ಕೆ ಅಲಂ ಎಂದು ಉಸಿರಬೇಕಾಗಿ ಬರುವದು. ಇಂದಿನದು ಬರಿ ಅನುಕರಣ ಸಾಹಿತ್ಯವೆಂದು ಹೇಳುವವರು, ತ್ರಿಕರಣಪೂರ್ವಕವಾಗಿ ಪರೀಕ್ಷಿಸುವದಿಲ್ಲ. ( ಅನೇ ಪು. ೩೧. ೩೫ ). ಪ್ರಾಚೀನ ಸಾಹಿತಿಗಳು ಇಡಿಯನ್ನು ಚೆನ್ನಾಗಿ ನೋಡುತ್ತಿದ್ದರು. ಅದನ್ನು ಬಿಡಿಯಲ್ಲಿಯೂ ಸಹ ಕಾಣುತ್ತಿದ್ದರು. ಆದರೆ ಇಡಿಯನ್ನು ಬಿಡಿಬಿಡಿಯಾಗಿ ನೋಡುವದರಲ್ಲಿ ಪ್ರಾಚೀನ ಸಾಹಿತಿಗಳು ಬಲ್ಲಿದರಾಗಿದ್ದಾರೆ. ( ಅದೇ ಪು. ೫೦). ಸಿದ್ಧಿಯು ಕಣ್ಣು ಕುಕ್ಕಿಸುವಷ್ಟು ನಮ್ಮ ಸಾಹಿತ್ಯದಲ್ಲಿ ಸಾಧ್ಯವಾಗದಿದ್ದರೂ, ಆದರ ಹಾದಿಯಲ್ಲಿ ವೃದ್ಧಿಯು ಸಾಕಷ್ಟಾಗಿದೆ. (ಪು. ೫೫). ಹೀಗೆ ಹತ್ತಾರು ಉದಾಹರಣೆ ಕೊಡಬಹುದು. ಹಲವು ಸಲ ಈ ಶಬ್ದಸಾಮ್ಯಗಳ ಅಭಿಲಾಷೆಯು ದೂರಾನ್ವಯವಾದಾಗ ಅರ್ಥವು ಕ್ಲಿಷ್ಟವಾಗುವದು. ಉದಾಹರಣೆಗೆ Golf ದಂತೆ Beowulfವೆಂಬ ಕಾವ್ಯವು ಮನೋರಂಜನ ಸಾಧನವಾಗಿದೆ. (ನವ್ಯತೆ ಹಾಗೂ ಕಾವ್ಯಜೀವನ. ಪು. ೭೩).

ಕಾವ್ಯದಲ್ಲಿ ಅನುಭವ ಮತ್ತು ನಿರೂಪಣೆಗಳ ದೃಷ್ಟಿಯಿಂದ ನವ್ಯತೆ ಬೇಕೆಂದಾಗ ಹಲವರು ಪ್ರಾಮಾಣಿಕವಾಗಿಯೇ ಕೆಲವು ಪ್ರಶ್ನೆಗಳನ್ನು ಕೇಳಿಕೊಂಡಿದ್ದಾರೆ. ತೀರ ಹೊಸ ಪ್ರತಿಮೆಗಳು ಕಾವ್ಯದಲ್ಲಿ ಬೇಕೆಂದಾಗ ಹಳೆಯ ರೂಪಕಗಳು, ಛಂದಸ್ಸಿನ ಹೊಸಕಟ್ಟು ಬೇಕೆಂದಾಗ ಈಗಿರುವ ರೀತಿ ಇಂಗ್ಲೀಷ ಭಾಷೆಯಲ್ಲಿ ಬೇಸರವಾದ ಹಾಗೆ ಕನ್ನಡದಲ್ಲಿಯೂ ಬೇಸರವಾಗಿದೆಯೇ? ಟೆನಿಸನ್ನನ ಶಬ್ದವಿನ್ಯಾಸದ ರೇಶಿಮೆಯ ಮೃದುತ್ವ, ಬ್ರಾನಿಂಗನ ಧೈರ್ಯಯುತವಾದ ಬರವಣಿಗೆಗೆ ಮಾರ್ಗಮಾಡಿಕೊಟ್ಟಿದೆ ಏನೋ ನಿಜ. ಆದರೆ ಕನ್ನಡದಲ್ಲಿಯೂ ಹೀಗೆ ಆಗಿದೆಯೇ ? ಬೇಂದ್ರೆಯವರ ಊಹಾವಿಲಾಸ, ಶಬ್ದವೈಖರಿ, ಮಾಧುರ್ಯ, ಪುಟ್ಟಪ್ಪನವರ ಉನ್ನತೋನ್ನ ರೂಪಕಗಳು ಮತ್ತು ವಾಗ್ವೈಭವ ನಿಜವಾಗಿ ಕನ್ನಡಕ್ಕೆ ಸಾಕಾಗಿರುವವೇ? ಅರ್ಥಾತ್ ಅನ್ಯದೇಶೀಯ ಸಾಹಿತ್ಯಗಳಲ್ಲಿ ಉಂಟಾದ ಕ್ರಾಂತಿಗಳನ್ನು ನಾವು ಕೇವಲ ಅನಾಮತ್ತಾಗಿ ನಮ್ಮ ಸಾಹಿತ್ಯದಲ್ಲಿ ಸ್ವೀಕರಿಸುತ್ತಿದ್ದೇವೆಯೇ? ಅರ್ಥಾತ್ ಸಾಹಿತ್ಯದಲ್ಲಿ ಪ್ರಗತಿ ಇಂಥ ಆಮದು ತೆಗೆದುಕೊಂಡ ಕ್ರಾಂತಿರೂಪವಿರುತ್ತದೆಯೇ ಅಥವಾ ಉತ್ಕ್ರಾಂತಿ ಸ್ವರೂಪದಲ್ಲಿರುತ್ತ

ದೆಯೇ? ಇದೇ ಮಾತನ್ನೇ ಕಳೆದ ಸಲ ಟೋಕಿಯೋದಲ್ಲಿ ನೆರವೇರಿದ P. E. ಸಮಾರಂಭದಲ್ಲಿ ಸ್ಟಿಫ್‌ನ್ ಸ್ಪೆಂಡರ್ ಅವರು ಉಲ್ಲೇಖಿಸುತ್ತಾ 'ಭಾರತೀ ಸಾಹಿತ್ಯ ಅನುಭವದ ಕುಲಿಮೆಯಲ್ಲಿ ಹಾಯ್ದು ಹೋಗದೇ ಅನ್ಯದೇಶ ಸಾಹಿತ್ಯಗಳ ಅನುಭವ ಮತ್ತು ತಂತ್ರಗಳನ್ನು ಕೇವಲ ಅನುಕರಣೆ ಮಾಡು ದೆ'ಂದು ಆರೋಪಿಸಿದರು. ಈ ಅಭಿಪ್ರಾಯದಲ್ಲಿ ಕೆಲಮಟ್ಟಿನ ತಥ್ಯಕಂಡುಬರ ದುಂಟು ಮಹಾಕವಿಯ ವ್ಯಕ್ತಿತ್ವವು ಇತರರು ಕಾಣದಿದ್ದದನ್ನೇ ಕಾಣುತ್ತ ಎಂದು ಒಪ್ಪಲೇಬೇಕು. ನಮ್ಮ ಪ್ರಾಚೀನರು ಕವಿಯು ಕ್ರಾಂತಿ ದರ್ಶನವೆಂ ಹೇಳಿದಾಗ ಭವಿಷ್ಯದ ಒಡಲನ್ನೇ ಭೇದಿಸುವ ಅವನ ಈ ಮಹಾಶಕ್ತಿಯನ ಹೊಗಳಿದ್ದಾರೆಯೆಂದು ಹೇಳಬೇಕು. ಆದ್ದರಿಂದ ಹೊಸ ಪ್ರತಿಮೆಗಳನ ಕವಿಯು ಸ್ವಾಗತಿಸುವಾಗ ಇಂತಹ ಕ್ರಾಂತಿಕಾರನಾಗಿದ್ದನೆಂದು ನಾವೂ ಗಮ ದಲ್ಲಿಡಬೇಕು. ಇನ್ನೊಂದು ಮಾತು. ಸಾಹಿತ್ಯದಲ್ಲಿ ಕಾವ್ಯ ಮತ್ತು ತತ ಜ್ಞಾನಗಳ ಹೊಂದಿಕೆ ಎಷ್ಟರ ಮಟ್ಟಿಗೆ ಗಾಢವಾಗಿರುತ್ತದೆ ಎಂಬ ಪ್ರಶ್ನೆ ಹಲವರು ಭಿನ್ನಾಭಿಪ್ರಾಯವನ್ನು ಸೂಚಿಸಿದ್ದಾರೆ. ನವ್ಯತೆ ಹಾಗು ಕಾವ್ಯ ಜೀವ ದಲ್ಲಿ ಅವರು ವ್ಯಕ್ತಪಡಿಸಿದ ಈ ಕೆಳಗಿನ ಅಭಿಪ್ರಾಯವು ಸರ್ವಸಮ್ಮತವೇ ವಿಚಾರಿಸಬೇಕು. "ಪ್ರತಿಯೊಬ್ಬ ಅನುಭಾವಿಯಲ್ಲಿ ಕವಿಯ ಅಂಶವಿರಬಹುದು ಆದರೆ ಪ್ರತಿಯೊಬ್ಬ ಕವಿಯಲ್ಲಿ ಅನುಭಾವಿಯ ಅಂಗವು ಇದ್ದೇ ಇರುತ್ತದೆ ಎಂಬ ಅವರ ಹೇಳಿಕೆಯನ್ನು ಅನೇಕರು ತಾತ್ವಿಕವಾಗಿ ಪ್ರಶ್ನಿಸುವುದುಂಟು ಕಾವ್ಯದ ಬೆಲೆ ತತ್ವಜ್ಞಾನದಲ್ಲಿ ಇದೆಯೇ? ಅನುಭವದ ವಿವರಣೆಯಲ್ಲಿದೆಯೆ ಎಂದು ಇವರ ಪ್ರಶ್ನೆ. ತತ್ವಜ್ಞಾನ ಮತ್ತು ಕಾವ್ಯ ಇಷ್ಟರ ಮಟ್ಟಿಗೆ ಸಂಲಗ ವಾಗಿವೆಯೇ? ವರ್ಡ್ಸ್‌ವರ್ಥ ಮಹಾಕವಿಯ ಕಾವ್ಯ ಮತ್ತು ತತ್ವಜ್ಞಾನದ ಬಗೆ ಮೆಥ್ಯೂ ಆರ್‌ನಾಲ್ಡ್‌ನು "ಕೊನೆಗೂ ವರ್ಡ್ಸ್‌ವರ್ಥನ ಕಾವ್ಯ ಚಿರಂತನ, ತತ ಜ್ಞಾನ ಸುಳ್ಳು" ಎಂದು ಹೇಳಲಿಲ್ಲವೇ? ಈ ಮಾತನ್ನು ಗಮನಿಸಿದಾಗ ಶ್ರೀ ಗೋಕಾಕರು 'ತತ್ವಜ್ಞಾನ' ಎಂಬ ಪದವನ್ನು ಪ್ರಯೋಗಿಸಿದಾಗ ಕ್ರಮಬ ವಾದ ತತ್ವವಿವರಣೆ ಎಂಬ ಅರ್ಥವನ್ನು ಇಟ್ಟುಕೊಳ್ಳದೇ ಕಾವ್ಯದಲ್ಲಿ ಸಾಮಾ ನ್ಯವಾದ ಜೀವನ ದೃಷ್ಟಿ ಎಂಬ ಅರ್ಥವನ್ನು ಇಟ್ಟುಕೊಂಡಿದ್ದಾರೆಂದು ನಾ ಭಾವಿಸಬೇಕು.

ಒಟ್ಟಾರೆ, ಸಾಹಿತ್ಯ ಮತ್ತು ವಿಮರ್ಶೆಯ ಸ್ವರೂಪಸಂಬಂಧವನ ವಿವರಿಸಿ ಆಂಗ್ಲ, ಮತ್ತು ಭಾರತೀಯ ವಿಮರ್ಶಾದೃಷ್ಟಿಯನ್ನು ತುಲನಾತ್ಮ

ನಾಗಿ ವಿವೇಚಿಸಿ ಅವುಗಳಲ್ಲಿ ಇರುವ ಸಾಮ್ಯವನ್ನು ಎತ್ತಿ ತೋರಿ ಇಂಗ್ಲೀಷ ವಿಮರ್ಶಾಪದ್ಧತಿಯನ್ನು ಕನ್ನಡ ಜನಕ್ಕೆ ಪರಿಚಯ ಮಾಡಿಕೊಟ್ಟು ಶ್ರೀ. ಗೋಕಾಕರು ಕನ್ನಡದ ವಿಮರ್ಶಾಸಾಹಿತ್ಯದ ಕಣಜವನ್ನು ತುಂಬಿದ್ದಾರೆ. ವಿಮರ್ಶಾಸಾಹಿತ್ಯದ ಅಧ್ವರ್ಯುಗಳಾಗಿದ್ದಾರೆ. ಇಂಥ ಪಾಂಡಿತ್ಯದ ಆಳ, ಅಗಲ, ಮತ್ತು ಸಂಸ್ಕೃತಿಗಳು ಕನ್ನಡದ ಬಹುದೊಡ್ಡ ಆಸ್ತಿ.

---

# ವಿನಾಯಕರ ಜೀವನಘಟನಾವಳಿಗಳು

ಇವರು ಆಗಸ್ಟ್ ೯, ೧೯೦೯ರಲ್ಲಿ ಹುಟ್ಟಿದರು.

ಸವಣೂರಿನ ಮಜೀದ ಹೈಸ್ಕೂಲಿನಿಂದ ೧೯೨೫ರಲ್ಲಿ ಮ್ಯಾಟ್ರಿಕ್ ಪಾಸಾದರು.

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ನಾಲ್ಕು ವರ್ಷ ಕಲಿತು ಅಲ್ಲಿಂದಲೇ ೧೯೨೯ರಲ್ಲಿ ಇಂಗ್ಲೀಷ ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಬಿ.ಎ. ಮೊದಲನೆಯ ತರಗತಿಯಲ್ಲಿ ಪಾಸಾದರು. ಇಂಗ್ಲೀಷಿನಲ್ಲಿ "ಎಲೆಜ್ ಪ್ರೈಜ್" ದೊರಕಿಸಿದರು. ಕರ್ನಾಟಕ ಕಾಲೇಜಿನ "ದಕ್ಷಿಣಾ ಫೆಲೊ" ಆಗಿ ಎರಡು ವರ್ಷ ಇದ್ದರು.

೧೯೩೦ರಲ್ಲಿ ಧಾರವಾಡದ ಬೆಟದೂರ ಮನೆತನದ ಕನ್ಯೆಯೊಡನೆ ಮದುವೆಯಾದರು.

೧೯೩೧ರಲ್ಲಿ ಅದೇ ಕಾಲೆಜಿನಿಂದ ಅದೇ ವಿಷಯ ತೆಗೆದುಕೊಂಡು ಎಂ.ಎ. ಯನ್ನೂ ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾದರು.

ಅದೇ ವರುಷ ಪುಣೆಯಲ್ಲಿ ಫರ್ಗ್ಯೂಸನ್ ಕಾಲೇಜಿನಲ್ಲಿ ಇಂಗ್ಲೀಷಿನ ಪ್ರಾಧ್ಯಾಪಕರೆಂದು ಕೆಲಸ ಹಿಡಿದು ೧೯೩೧ರಿಂದ ೧೯೩೬ರ ವರೆಗೆ ಅಲ್ಲಿ ಕೆಲಸ ಮಾಡಿದರು.

೧೯೩೪ರಲ್ಲಿ ರೈಚೂರಲ್ಲಿ ನೆರೆದ ಸಾಹಿತ್ಯ ಸಮ್ಮೇಲನದ ಅಂಗವಾಗಿದ್ದ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದರು.

ಮುಂಬೈ ವಿಶ್ವವಿದ್ಯಾಲಯದ ಪರವಾಗಿ ಇದೇ ಸುಮಾರಿಗೆ "Phylological Lectures" ಕೊಡುವ ಗೌರವವೂ ಇವರಿಗೆ ದೊರಕಿತ್ತು.

೧೯೩೬ರಲ್ಲಿ ಡಿ.ಎಲ್.ಇ. ಸೊಸಾಯಿಟಿಯವರು ಇವರನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಆಕ್ಸ್‌ಫರ್ಡಿಗೆ ಕಳಿಸಿದರು. ಅಲ್ಲಿ ೧೯೩೬ರಿಂದ ೧೯೩೮ರ ವರೆಗೆ ಇದ್ದು ಅಲ್ಲಿಯ ಪರಿಕ್ಷೆಯಲ್ಲಿಯೂ ಮೊದಲನೆಯ ತರಗತಿಯಲ್ಲಿ ಪಾಸಾಗಿ ಮರಳಿ ಬಂದರು.

ಪರದೇಶದಿಂದ ಮರಳಿ ಬಂದ ಮೇಲೆ ೧೯೩೮ರಿಂದ ೧೯೪೪ರ ವರೆಗೆ ಸಾಂಗ್ಲಿಯ ವಿಲಿಂಗ್‌ಡನ್ ಕಾಲೇಜಿನಲ್ಲಿ ಮುಖ್ಯ ಪ್ರಾಧ್ಯಾಪಕರಾಗಿ (Principal) ಕೆಲಸ ಮಾಡಿದರು.

೧೯೪೪ರಲ್ಲಿ ರಾಣೇಬೆನ್ನೂರಿನಲ್ಲಿ ನೆರೆದ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರಾಗಿದ್ದರು.

೧೯೪೪ರಲ್ಲಿ ಡಿ. ಎಲ್. ಇ. ಸೊಸಾಯಿಟಿಗೆ ರಾಜೀನಾಮೆ ಕೊಟ್ಟು ಆರು ತಿಂಗಳ ವರೆಗೆ ಧಾರವಾಡದಲ್ಲಿ ಕೆಲಸವಿಲ್ಲದೆ ಇದ್ದರು.

ಮುಂದೆ ೧೯೪೪ರಲ್ಲಿಯೇ ಹೈದರಾಬಾದದ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷಿನ ಪ್ರಾಧ್ಯಾಪಕರೆಂದು ಕೆಲಸ ಹಿಡಿದು ೧೯೪೪ರಿಂದ ೧೯೪೬ರ ವರೆಗೆ ಅಲ್ಲಿ ಕೆಲಸ ಮಾಡಿದರು.

ಹೈದರಾಬಾದದ ಕೆಲಸ ಬಿಟ್ಟು ವೀಸನಗರದಲ್ಲಿ ಪ್ರಾರಂಭವಾಗುವ ಹೊಸ ಕಾಲೇಜಿನ ಪ್ರಿನ್ಸಿಪಾಲರಾಗಿ ೧೯೪೬ರಿಂದ ೧೯೪೯ರ ವರೆಗೆ ಕೆಲಸ ಮಾಡಿದರು.

ಸಂಸ್ಥಾನಗಳು ವಿಲೀನವಾದ್ದರಿಂದ ವೀಸನಗರ ಕಾಲೇಜಿನಿಂದ ಕೊಲ್ಹಾಪುರದ ರಾಜಾರಾಮ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದು ೧೯೪೯ರಿಂದ ೧೯೫೩ರ ವರೆಗೆ ಕೆಲಸ ಮಾಡಿದರು.

೧೯೫೦ರಲ್ಲಿ ಮುಂಬೈಯಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನದ ಅಂಗವಾಗಿದ್ದ ಕವಿಗೋಷ್ಠಿಯ ಅಧ್ಯಕ್ಷಸ್ಥಾನ ವಹಿಸಿದ್ದರು.

ಕೊಲ್ಹಾಪುರದ ರಾಜಾರಾಮ ಕಾಲೇಜಿನಿಂದ ವರ್ಗವಾಗಿ ಮಾತೃಸ್ಥಾನದಲ್ಲಿದ್ದ, ತಮ್ಮ ಕರ್ನಾಟಕ ಕಾಲೇಜಿಗೇ ಪ್ರಿನ್ಸಿಪಾಲರಾಗಿ ೧೯೫೩ರಲ್ಲಿ ಬಂದು ಸದ್ಯದ ಕಾಲದ ವರೆಗೂ ಅಲ್ಲಿಯೇ ಕೆಲಸ ಮಾಡುತ್ತಿದ್ದಾರೆ.

೧೯೫೭ರಲ್ಲಿ ಜಪಾನದಲ್ಲಿ ಕೂಡಿದ ಪಿ. ಇ. ಎನ್. ಸಮ್ಮೇಲನಕೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದರು.

೧೯೫೮ರಲ್ಲಿ ಬಳ್ಳಾರಿಯಲ್ಲಿ ಕೂಡಿದ ಸಾಹಿತ್ಯಸಮ್ಮೇಲನದ ಅಧ್ಯಕ್ಷಸ್ಥಾನ ವಹಿಸಿದ್ದರು.

* * * *

ವಿನಾಯಕರು ಧಾರವಾಡದ 'ಗೆಳೆಯರ ಗುಂಪಿ'ನ ಒಬ್ಬ ಗೆಳೆಯರು.

ಮನೋಹರ ಗ್ರಂಥಮಾಲೆಯ ಮೂವರು ಸಾಹಿತ್ಯವಿಷಯದ ಸಲಹೆಗಾರರಲ್ಲಿ ಒಬ್ಬರು.

'ಗೆಳೆಯರ ಗುಂಪು' ನಡೆಸುತ್ತಿದ್ದ ಜಯಕರ್ನಾಟಕಕ್ಕೆ ಬೆನ್ಬಲವಾಗಿ ಕೆಲಸ ಮಾಡಿದರು.

'ಜೀವನ' ಪತ್ರಿಕೆಯು ಧಾರವಾಡದಲ್ಲಿ ನಡೆಯುತ್ತಿದ್ದಾಗ ಅದರ ಸಂಪಾದಕ
ರಲ್ಲಿ ಒಬ್ಬರು.

ಪುಣೆಯಲ್ಲಿಯ 'ಅರವಿಂದ-ಮಂಡಲ', ಸಾಂಗ್ಲಿಯಲ್ಲಿಯ 'ವರುಣ ಕುಂಜ,'
ಕರ್ನಾಟಕ-ಕಾಲೇಜಿನ 'ಕಮಲ-ಮಂಡಲ' ಮೊದಲಾದ ಸಾಹಿತ್ಯ ಸಂಸ್ಥೆಗಳಿಗೆ
ಜೀವಸ್ವರೂಪರಾಗಿದ್ದರು.

* * * *

**ವಿನಾಯಕರ ಸಾಹಿತ್ಯಪ್ರಕಟನೆ ಹೀಗಿದೆ:**

(೧೯೩೩) : ಸುದರ್ಶನ ಕಾದಂಬರಿಗೆ ಮುನ್ನುಡಿ. (೧೯೩೪) : ಕಲೋ
ಪಾಸಕ (ಕವನ ಸಂಗ್ರಹ). (೧೯೩೫) : ೧ ಕೋಲ್ಮಿಂಚಿಗೆ ಮುನ್ನುಡಿ. ೨
ತುಳಸಿ (ಏಕಾಂಕ. ಕೋಲ್ಮಿಂಚಿನಲ್ಲಿ). ೩ ಇಜ್ಜೋಡು ೧-೨ (ಕಾದಂಬರಿ)
೪ ಕವಿಕಾವ್ಯ ಮಹೋನ್ನತಿ (ವಿಮರ್ಶೆ). (೧೯೩೭) : ೧ ಪಯಣ (ಕವನ
ಸಂಗ್ರಹ). ೨ ಸಮುದ್ರದಾಚೆಯಿಂದ (ದಿನಚರಿ-ಪತ್ರಗಳು). (೧೯೩೮)
ಜನನಾಯಕ(ನಾಟಕ). (೧೯೩೯): ಸುಳಿವುಕೊಳವಿಗೆ ಮುನ್ನುಡಿ.(೧೯೪೦)
೧ ಸಮುದ್ರ ಗೀತಗಳು(ಕವನ ಸಂಗ್ರಹ). ೨ ವಿಮರ್ಶಕವೈದ್ಯ (ನಾಟಕ)
(೧೯೪೪): ೧ ಅಭ್ಯುದಯ(ಕವನಸಂಗ್ರಹ). ೨ ಸಾಹಿತ್ಯದಲ್ಲಿ ಪ್ರಗತಿ(ವಿಮರ್ಶೆ
(೧೯೪೫): ೧ ಇಜ್ಜೋಡು ೩(ಕಾದಂಬರಿ). ೨ ತ್ರಿವಿಕ್ರಮರ ಆಕಾಶಗಂ
(ಕವನ ಸಂಗ್ರಹ). ೩ ಇಂದಿನ ಕರ್ನಾಟಕ (ನಗರ-ಚಿತ್ರಗಳು). ೪ ಚೆಲುವಿ
ನಿಲುವು (ವಿಮರ್ಶೆ). (೧೯೪೭): ೧ ಯುಗಾಂತರ (ನಾಟಕ) ೨ ಇಜ್ಜೋಡ
೪-೫ (ಕಾದಂಬರಿ). ೩ ಕನ್ನಡ ಕಾವ್ಯದ ಗೊತ್ತುಗುರಿಗಳು (ವಿಮರ್ಶೆ)
(೧೯೪೭) : ಇಜ್ಜೋಡು ೬ (ಕಾದಂಬರಿ). (೧೯೪೮): ಇಜ್ಜೋಡು
(ಕಾದಂಬರಿ). (೧೯೫೦): ೧ ಹಿಗ್ಗು (ಕವನ ಸಂಗ್ರಹ). ೨ ನವ್ಯಕವಿತೆಗಳ
ಕವನ ಸಂಗ್ರಹ). ೩ ಜೀವನಪಾಠಗಳು (ಪತ್ರ-ಪ್ರಬಂಧಗಳು). (೧೯೫೨)
ಇಜ್ಜೋಡು ೮ (ಕಾದಂಬರಿ). (೧೯೫೩): ಇಜ್ಜೋಡು ೯ (ಕಾದಂಬರಿ).
ಬಾಳದೇಗುಲದಲ್ಲಿ (ಕವನ ಸಂಗ್ರಹ). (೧೯೫೫) : ೧ ಉಗಮ (ಕವ
ಸಂಗ್ರಹ.) ೨ ನವ್ಯತೆ ಹಾಗು ಕಾವ್ಯಜೀವನ (ವಿಮರ್ಶೆ). (೧೯೫೬) : ಸವ
ರಸವೇ ಜೀವನ (ಕಾದಂಬರಿಯ ಸಂಪೂರ್ಣ ಸಂಪುಟ). (೧೯೫೭): ದ್ಯಾವಾ
ಪೃಥಿವೀ (ಕವನಸಂಗ್ರಹ).